

ಕೈಲಾಸವಾಸ ಗೌರೀಶ ಈಶ || ಪ ||
ತೈಲಧಾರೆಯಂತೆ ಮನಸುಕೊಡು ಹರಿಯಲ್ಲಿ ಶಂಭೋ || ಅ.ಪ

ಅಹೋರಾತ್ರಿಯಲ್ಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೊ ಮಹದೇವನೆ
ಅಹಿಭೂಷಣನೆ ಎನ್ನವಗುಣಗಳ ಎಣಿಸದಲೆ
ವಿಹಿತ ಧರ್ಮದಿ ಕೊಡು ವಿಷ್ಣು ಭಕ್ತಿಯ ಶಂಭೋ -1-

ಮನಸುಕಾರಣವಲ್ಲ ಪಾಪಪುಣ್ಯಕ್ಕೆಲ್ಲ
ಅನಲಾಕ್ಷ ನಿನ್ನ ಪ್ರೇರಣೆಯಿಲ್ಲದೆ
ದನುಜಗಜಹರಿಯೆದಂಡಪ್ರಣಾಮವ ಮಾಳ್ಪೆ
ಮಣಿಸು ಈ ಮನವ ಸಜ್ಜನರ ಚರಣದಿ ಶಂಭೋ -2-

ಭಾಗಿರಥೀಧರನೆ ಭಯವ ಪರಿಹರಿಸಯ್ಯ ಲೇ
ಸಾಗಿ ಒಲಿದು ಸಂತತ ಶರ್ವದೇವ
ಭಾಗವತ ಜನಪ್ರಿಯ ವಿಜಯ ವಿಠಯಸಂಘ್ರಿ
ಜಾಗುಮಾಡದೆ ಭಜಿಪ ಭಾಗ್ಯವನು ಕೊಡು ಶಂಭೋ --3-

—ಶ್ರೀ ವಿಜಯದಾಸರು.

ಕೊಳ್ಳಿರಿ ಕೊಂಡು ಓದಿರಿ

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ

## ಮಾರ್ಚ್ 1996

ಮಾರ್ಚ್ 1996 ರ ತಿಂಗಳಿನಲ್ಲಿ ಯುಗಾದಿ ಹಬ್ಬ, ರಾಮನವಮಿ, ವಾದಿರಾಜರ ಆರಾಧನೆ ಮೊದಲಾದವು ಸಪ್ತಗಿರಿಯ ವಾಚಕರನ್ನು ಸ್ವಾಗತಿಸುತ್ತವೆ. ಹಾಗಾಗಿ ಹಲವಾರು ಕುತೂಹಲಕಾರಿ, ಭಕ್ತಿ ಭರಿತವಾದ ಲೇಖನಗಳಿಂದ ಸಪ್ತಗಿರಿಯನ್ನು ಸಂದೇಶ ವಾಹಕವನ್ನಾಗಿ ಮಾಡಲು ಪ್ರಯತ್ನಿಸಲಾಗಿದೆ. ಮಾರ್ಚ್ ತಿಂಗಳ ಮುಖ್ಯ ಲೇಖನಗಳ ಸೂಚನೆಯನ್ನಿಲ್ಲಿ ನೀಡಲಾಗಿದೆ.

### ಯುಗಾದಿ ಮರಳಿ ಬರುತಿದೆ :

ಕಾಲಚಕ್ರ ತಿರುಗಿದಂತೆಲ್ಲ ಪ್ರತಿವರ್ಷವೂ ಬರುವ ಯುಗಾದಿಯ ನೆನಪಿನ ಉತ್ಸವದ ಬಗ್ಗೆ ವಿವರಿಸಿದ್ದಾರೆ ಸಾಲಿಮಠ ದೊಡ್ಡಯ್ಯಶಾಸ್ತ್ರೀ.

### ತೈತ್ತರೀಯ ಉಪನಿಷತ್ :

ಉಪನಿಷತ್ಪ್ರಪಂಚದಲ್ಲಿ ತೈತ್ತರೀಯ ಉಪನಿಷತ್‌ನ ಸ್ಥಾನ, ಅದರ ಒಳ ಮಂತ್ರಾರ್ಥ ವಿವರಣೆಗಳನ್ನು ನೀಡಿದ್ದಾರೆ ಪೊನ್ನಂಪೇಟೆಯ ರಾಮಕೃಷ್ಣ ಶಾರದಾಶ್ರಮದ ಸ್ವಾಮಿಜೀ ಶ್ರೀ ಶ್ರೀ ಪುರುಷೋತ್ತಮಾನಂದಜೀ ಅವರು.

### ವಾದಿರಾಜರ ಪಂಚವೃಂದಾವನ :

ವಾದಿರಾಜರ ಆರಾಧನೆಯ ಪ್ರಯುಕ್ತ ಸೋದೆಯಲ್ಲಿನ ವಾದಿರಾಜ ಬೃಂದಾವನದ ಬಗ್ಗೆ ವಿವರಗಳನ್ನು ಒದಗಿಸಿದ್ದಾರೆ ಉಡುಪಿಯ ಎಸ್. ಕೆ. ಆಚಾರ್ಯ.

### ರಾಮನ ಗುಣ ವರ್ಣನೆ :

ವಾಲ್ಮೀಕಿಯ ರಾಮಾಯಣದಲ್ಲಿ ನಾರದರು ಮೊದಲಿಗೆ ರಾಮಚಂದ್ರನ ಪುರುಷೋತ್ತಮತೆಯನ್ನು ವಿವರಿಸುತ್ತಾರೆ. ಇದರ ವಿವರವನ್ನು ನೀಡಿದ್ದಾರೆ ಗುರುನಾಥ ಇನಾಮದಾರ.

### ಯಾದವಗಿರಿ ಮಹಾತ್ಮೆ:

ಮೇಲುಕೋಟೆ ಕರ್ನಾಟಕದ ಪವಿತ್ರಪ್ರಸಿದ್ಧ ತೀರ್ಥಯಾತ್ರಾಕ್ಷೇತ್ರಗಳಲ್ಲಿ ಒಂದು. ಅದರ ಪುರಾಣವನ್ನಿಲ್ಲಿ ಸಂಗ್ರಹಿಸಿ ನೀಡಿದ್ದಾರೆ ಜಗ್ಗು ನರಸಿಂಹಾಚಾರ್ಯ.

### ಚಿಕುಪಾಧ್ಯಾಯನ ಅರ್ಥಪಂಚಕ :

ಅರ್ಥಪಂಚಕ ರಾಮಾನುಜ ಸಾಹಿತ್ಯದಲ್ಲಿ ಪ್ರಮುಖವಾದ ಅಂಶ. ಅದನ್ನು ಚಿಕುಪಾಧ್ಯಾಯ ಕನ್ನಡದಲ್ಲಿ ಪದ್ಯವಾಗಿಸಿದ್ದು ಇತಿಹಾಸ. ಅದರ ವಿವರಣೆ ನೀಡಿದ್ದಾರೆ - ಕಂದಾಡೈ ಕೇಶವನ್.

ಜೊತೆಗೇ ಹಲವಾರು ಸಾಮಯಿಕ ಲೇಖನಗಳೊಡನೆ ಪ್ರಕಟವಾಗಲಿದೆ. ತಮ್ಮ ಪ್ರತಿಯನ್ನು ಕಾಯ್ದಿರಿಸಿ.

ವಾರ್ಷಿಕಚಂದಾ - ಏಪ್ರಿಲ್ 1996 ರಿಂದ - ರೂ. 48/- ಮಾತ್ರ. ತಾವು ಚಂದಾ ಹಣವನ್ನು ಸಂಪಾದಕರು - ಸಪ್ತಗಿರಿ - ತಿ.ತಿ.ದೇ. ತಿರುಪತಿ - ಇವರಿಗೆ ಕಳುಹಿಸಬಹುದು.

ಓದಿರಿ ಓದಿಸಿರಿ

# ತಿಂಗಳಿನ ಮುಖ್ಯದಿನಗಳು

## ಮಾರ್ಚ್ --- 1996

1. ಶುಕ್ರವಾರ :
ಕುಲಶೇಖರಾಳ್ವಾರ್
ವರ್ಷ ತಿರುನಕ್ಷತ್ರ.
ತಿರುಮಲೆಯಲ್ಲಿ ತೆಪ್ಪೋತ್ಸವಾರಂಭ.

3. ಭಾನುವಾರ :
ಖಗ್ರಾಸ ಚಂದ್ರಗ್ರಹಣ.

5. ಮಂಗಳವಾರ :
ತಿರುಮಲೆಯಲ್ಲಿ ತೆಪ್ಪೋತ್ಸವ ಸಮಾಪ್ತಿ.
ಕುಮಾರಧಾರಾ ತೀರ್ಥ ಮುಕ್ಕೋಟಿ.

8. ಶುಕ್ರವಾರ :
ಶ್ರೀವಾದಿರಾಜರ ಆರಾಧನೆ.

14. ಗುರುವಾರ :
ಮೀನಸಂಕ್ರಮಣ.

17. ಭಾನುವಾರ :
ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಬ್ರಹ್ಮೋತ್ಸವದ ಅಂಕುರಾರ್ಪಣೆ.

20. ಬುಧವಾರ :
ಚಾಂದ್ರಮಾನ ಯುಗಾದಿ

22. ಶುಕ್ರವಾರ :
ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಬ್ರಹ್ಮೋತ್ಸವದ ಗರುಡೋತ್ಸವ.

25. ಸೋಮವಾರ :
ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಬ್ರಹ್ಮೋತ್ಸವದ ರಥೋತ್ಸವ.

26. ಮಂಗಳವಾರ :
ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಬ್ರಹ್ಮೋತ್ಸವದ ತೀರ್ಥವಾರಿ

28. ಗುರುವಾರ :
ಶ್ರೀರಾಮನವಮಿ.








ಹರಿಯನ್ನು ಸ್ಥಿತಿಕಾರಕನೆಂದೂ ಹರನನ್ನು ಲಯಕಾರಕನೆಂದೂ ಕರೆದರಷ್ಟೆ. ಹರಿ ನಾಗಶಯನನಾದರೆ ಹರ ನಾಗಾಭರಣ, ಆತ ಗೋಪಾಲನಾದರೆ ಈತ ಪಶುಪತಿ, ಆತ ವಕ್ಷಸ್ಥಲ ಲಕ್ಷ್ಮಿಯಿಂದಾಗಿ ಶ್ರೀನಿವಾಸ. ಈತನೋ ಅರ್ಧನಾರೀಶ್ವರ. ಹೀಗೇ - ಆತ ಸ್ಥಿತಿಕಾರಕನೆಂದರೆ ಈತ ಮೃತ್ಯುಂಜಯ. ವಿಷಯ ಶಿವರಾತ್ರಿಯದಾಗಿ ಶಿವನ ಬಗ್ಗೆ ಯೋಚನೆ ಹರಿದಾಗ ಮೂಡುವ ಭಾವಗಳು ಹೀಗೆಯೇ ಮುಂದುವರಿಯುತ್ತವೆ.

ಸಾಗರದ ಮಥನದಲ್ಲಿ ಉದ್ಭವವಾದ ವಿಷವನ್ನು ನುಂಗಲೇಕೆ ಅವನಿಗೆ ಬರೇ ಲಯದಲ್ಲಿ ಪ್ರೀತಿಯಿದ್ದರೆ? ಗಂಗೆ ಧುಮುಕುವಾಗ ಅವಳ ರಭಸವನ್ನು ತಡೆಯುವ ಮನವಾದರೂ ಏಕೆ ಅವ ಶುಭಂಕರನಲ್ಲದೆ - ಶಂಕರನಲ್ಲದೆ - ಹೋದರೆ? ಹೀಗಾಗಿ ಯಾವ ದೈವವನ್ನು ಲಯಕಾರಕನೆಂದು ಕರೆದವೋ ಅವನು ಸ್ಥಿತಿಕಾರಕನೂ ಹೌದು ಎನ್ನುತ್ತದೆ ತರ್ಕ, ಮಾನವ ಮತಿ.

ಈ ಹಿನ್ನೆಲೆಯಲ್ಲಿ ನೋಡಿದಾಗ ಶಿವನೆಂಬುದೂ, ವಿಷ್ಣುವೆಂಬುದು, ಗುಣಗಳ ಸ್ಥೂಲ ವಿಭಾಗಮಾತ್ರವೇ ಎಂದೂ, ಅಂತಸ್ಸತ್ವದ ವೈಭಾಗಿಕ ರೇಖೆ ಅಲ್ಲವೆಂದೂ ತಿಳಿಯುವುದು ಸಹಜ.

ಪಾಶುಪತ ಸಂಗ್ರಹಕ್ಕೆ ಮೊದಲು ಶಿವಪ್ರೀತಿಯನ್ನು ಗಳಿಸಲು ಪಾರ್ಥ ಇಂದ್ರಕೀಲದಲ್ಲಿ ತಪಸ್ಸು ಮಾಡುತ್ತಿದ್ದಾಗ ಅವನೊಡನೆ ಪರೀಕ್ಷೆಗಾಗಿ ಯುದ್ಧವಾಡುತ್ತಾನೆ ಶಿವ. ಹಮ್ಮಿನಿಂದ ಕೂಡಿದ ಪಾರ್ಥ ಕೈಸಾಗದಿದ್ದಾಗ ಮುಂದಿರುವವನು ಪರಮಶಿವನೆಂದು ತಿಳಿದು ದಿಗ್ಮೂಢನಾಗುತ್ತಾನೆ. ಆಗ ಶಿವಕೀರ್ತನೆ ಮಾಡುತ್ತ--

ಹರಹರಾ ತ್ರೈಮೂರ್ತಿ ರೂಪನು ಧರಿಸಿಯತುಳ ಮಹಾಪ್ಪ ಮೂರ್ತಿಯ
ಧರಿಸಿಯನುಪಮ ವಿಶ್ವಮೂರ್ತಿಯ ಧರಿಸಿ ರಂಜಿಸುವ ಪರಿಯನರಿವವರಾರು ದೇವ
ಸುರ ಮುನೀಶರಿಗರಿದು ಕೃಪೆಯಿಂ ಕರುಣಿಸಲು ಬಂದ್ಯೆ ಮಹಾದೇವೆಂದನಾ ಪಾರ್ಥ

ವ್ಯಾಸ ಕಿಂಕರನೂ, ಶುಕರೂಪಿಯೂ ಆದ ಕುಮಾರ ವ್ಯಾಸ ಬರೆದಿರಬಹುದು! ಒಂದು ಸತ್ಯವನ್ನು ಯಾರು ಹೇಳಿದರೂ ಅದು ಸತ್ಯವೇ! ಇಲ್ಲಿ ಕುಮಾರವ್ಯಾಸ ಅರ್ಜುನನ ಬಾಯಲ್ಲ - ತನ್ನ ನುಡಿಗಳನ್ನು ಹಿಂದಿನಿಂದ ಬಂದ - ತಿಳಿದ ಸತ್ಯವನ್ನು - ಹಾಕಿದ್ದಾನೆ. 'ಹೋರಾಟ ವಿಕ್ಕಿಸಲು ದೇರಾವೆಯಲ್ಲದೆ ದೇರುಂಟೆ ಜಗದೊಳಗೆ ಎಲೆ ದೇವನೆ' ಎಂಬ ಕವಿವಾಣಿಯನ್ನೂ ನೆನೆಯಬಹುದು. ಅವರಿವರ ಮಾತೇಕೆ ಅವನ ಮಾತೇ ಸಾಕ್ಷಿ ಎಂದರೆ ರುದ್ರಾಣಾಂ ಶಂಕರಶ್ಚಾಸ್ಮಿ ಎನ್ನುವ ಮಾತೂ, ಅವರವರ ಭಾವಕ್ಕೆ ಅವರವರು ಪೂಜಿಸಿದಂತೆ ಕಂಡು ಬರುತ್ತೇನೆ ಎಂದೂ ಭಗವಂತನೇ ಗೀತೆಯಲ್ಲಿ ಘೋಷಿಸಿದ್ದಾನೆ. ಹಾಗೆಂದೇ ನಾವು ಜನಜೀವನದಲ್ಲಿ ಶಂಕರನಾರಾಯಣರನ್ನು, ಹರಿಹರರನ್ನು, ಹರಿಶಂಕರರನ್ನು ಕಾಣುತ್ತೇವೆ. ವೆಂಕಟನಾರಾಯಣನೂ, ವೆಂಕಟ ಶಿವನೂ ಕಂಡು ಬರುತ್ತಾರೆ.

ತಾತ್ಪರ್ಯ - ಒಬ್ಬನೇ ನಿರ್ಗುಣ ನಿರಾಮಯ, ನಿಷ್ಕಲಂಕ, ನಿರ್ಮಲ ರೂಪನು ಸಗುಣವಾಗಿ ಸರ್ವಗುಣಗಳ ಶೇಷಿಯಾಗಿ ನಿಂತಾಗ ವಿವಿಧ ರೂಪಗಳಲ್ಲಿ ಕಂಡುಬರುವುದು ಸಹಜ. ಹಾಗೆಂದೇ ಶಿವಕೇಶವರಲ್ಲಿ ಅಭಿನ್ನತೆಯನ್ನು ಸೂಚಿಸುವ ಭಾಗವತಪಂಥ ಬೆಳೆಯಿತು. ಎಲ್ಲ ವೇದಗಳ ವಸ್ತುವೂ; ಉದ್ದೇಶವೂ, ಒಬ್ಬನೇ ಆದ ಅವನನ್ನು ತತ್ವವಂತೆ ಸ್ಥಿತಿಕಾರಕ ಲಯಕಾರಕ ರೂಪಗಳಲ್ಲಿ ನಮ್ಮ ಅನುಕೂಲಕ್ಕಾಗಿ ನೋಡಲಾಯಿತಲ್ಲದೆ ಅವನಲ್ಲಿ ಭಿನ್ನತೆಯೆಲ್ಲಿ ಬರಬೇಕು. ಅದು ಪೂರ್ಣ ಇದೂ ಪೂರ್ಣವೇ ಆಗಿರುವಾಗ, ಹಾಗಾಗಿಯೇ ವೈಕುಂಠ ಏಕಾದಶಿಯಂತೆಯೇ ಶಿವರಾತ್ರಿಯನ್ನೂ ಎಚ್ಚರದಲ್ಲಿ, ಅವನ ನೆನಪಿನಲ್ಲಿ, ಸ್ತುತಿಯಲ್ಲಿ, ಅವನತ್ತ ನಡೆವಲ್ಲಿ ಕಳೆಯಬೇಕೆಂದರು.

ಶಿವರಾತ್ರಿಯ ಶುಭ ಸಂದರ್ಭದಲ್ಲಿ ನಾವು ಆ ಪ್ರಯತ್ನದಲ್ಲಿ ತೊಡಗುವುದರಿಂದ ಅವನ ಪ್ರೀತಿಯನ್ನು ಪಡೆವಲ್ಲಿ ಸಫಲರಾಗುವುದಷ್ಟೇ ಅಲ್ಲ; ಇಲ್ಲಿನ ಬದುಕೂ ಸುಖಮಯವಾಗಬಹುದು.

# ದಾಸ ಸಾಹಿತ್ಯದಲ್ಲಿ ಶ್ರೀನಿವಾಸ

---ಪ್ರೊ. ವಸಂತ ಕುಷ್ಟಗಿ.

ಶ್ರೀನಿವಾಸನ ಕಲ್ಪನೆಯನ್ನು ಸದಾ ಮಾಡಿಕೊಳ್ಳುತ್ತಿರುವುದೇ ಒಂದು ಸೊಗಸು. ಆ ಸೊಗಸಿನ ಅಂತರಾಳವೇ ಶ್ರೀನಿವಾಸ. ಈ ಶ್ರೀನಿವಾಸನ ಸಂದೇಶವೇನೆಂದರೆ, "ಈಸಬೇಕು ಇದ್ದು ಜೈಸಬೇಕು. ಏಕೆಂದರೆ ಮಾನವ ಜನ್ಮ ದೊಡ್ಡದು", ಎಂಬುದೇ ಆಗಿದೆ. ಆದ್ದರಿಂದ ಈ ಕಲ್ಪನೆಯ ಭೂಮತೆಯಲ್ಲಿ ಜನಪದ ನಿಲುವಿನ, ಅರ್ಥಾತ್ ಜನಾರ್ದನ ತತ್ವದ ನಿಲುವಿನ ಸೊಗಸು ಸದಾ ಪರಿಮಳಿಸಿದೆ. ಆ ಪರಿಮಳವಾದರೂ, ವಾಯು ಜೀವೋತ್ತಮತತ್ವದ ಒಳತಿರುಳಿನತ್ತ ಶ್ರೀ ಸಾಮಾನ್ಯರೆಲ್ಲರನ್ನೂ ಕರೆದೊಯ್ಯಲು ಹವಣಿಸುತ್ತಿರುತ್ತದೆ. ಆದ್ದರಿಂದಲೇ ಇಲ್ಲೆಲ್ಲ ಸಕಲ ಜೀವಿಗಳಿಗೆ ಲೇಸನೆ ಬಯಸಲು ಉಜ್ಜೋಗಿಸಿರುವ ಶ್ರೀನಿವಾಸತ್ವದ ಅನುಭವವು ಸಾಧ್ಯವಾಗಿರುತ್ತದೆ.



ಇದನ್ನು ಅರಿತ ಕರ್ನಾಟಕದ ಹರಿದಾಸರು ಶ್ರೀನಿವಾಸನನ್ನು ಆತ್ಮಸಾತ್ ಮಾಡಿಕೊಂಡು ತಮ್ಮ ಅನುಭವ ನಿವೇದ್ಯನಾಗಿರುವ ಆ ಶ್ರೀನಿವಾಸನ ದರ್ಶನವನ್ನು ಬಹುತೇಕ ಎಲ್ಲ ಹರಿದಾಸರೂ ತಮ್ಮ ಸಾಹಿತ್ಯದ ಮೂಲಕ ಭಕ್ತರ ಮನಸ್ಸಿನಲ್ಲಿ ಸ್ಥಾಯಿಯಾಗುವಂತೆ ಮಾಡಿಕೊಟ್ಟಿದ್ದಾರೆ. ಶ್ರೀನಿವಾಸನು ಎಲ್ಲ ಅಣುರೇಣು ತೃಣಕಾಷ್ಠಗಳಲ್ಲಿಯೂ ಇರುವುದರಿಂದ, ಮೂರ್ತಿಮತ್ತಾಗಿರುವ ಭಾಗ್ಯದ ಬಾಗಿಲು ತೆರೆಯುತ್ತದೆಂದು ನಂಬಿದವರ ಕಿಮತ್ತ್ವನ್ನು ಹೆಚ್ಚಿಸಿ ಹಾಡಿದ್ದಾರೆ. ಅಂತಹ ಹಾಡುಗಳಲ್ಲೆಲ್ಲ ಜನಪದ ಕಾಳಜಿಯು ಸ್ಫುಟವಾಗಿರುವುದು ಮನನವಾಗುತ್ತದೆ.

ಈ ಶ್ರೀನಿವಾಸನು ಮತ್ತೆ ಬೇರೆ ಯಾರೂ ಆಗಿರದೆ, ತಿರುಪತಿಯ ತಿಮ್ಮಪ್ಪ - ತಿರುಪತಿಯ ಎಂಕಪ್ಪನೇ ಆ ದೈವತ. ಇಂದು ಆತ ನಂಬಿದವರ ಭಾಗ್ಯನಿಧಿ, ತಾನು ಸ್ವತಃ ಸಾಲಗಾರನಾಗಿದ್ದರೂ, ನಂಬಿದವರಿಗೆ ಕಲ್ಪವೃಕ್ಷವಾಗಿಬಿಡುವ ಚೈತನ್ಯ. ಬಹುಶಃ ಭಾರತದ ಅರ್ಥನೀತಿಯೂ ಈತನಿಂದಲೇ ಪ್ರೇರಣೆ ಪಡೆಯುತ್ತ ಸಾಗಿರಬೇಕು. ಅದೇನೆ ಇದ್ದರೂ ಅಧ್ಯಾತ್ಮದ ಅರ್ಥ ನೀತಿಗೆ, ಈತ ಬದುಕಾಗಿರುವುದು ಮಾನವ ಕಲ್ಯಾಣಾಪೇಕ್ಷಿತವಾದ ದಾಸ ಸಾಹಿತ್ಯದಂತಹ ಸಾಹಿತ್ಯದ ಪ್ರಕಾರದ ಅಂತರಾಳವನ್ನು ಬಗೆದು ನೋಡಿದಾಗ ಮನವರಿಕೆಯಾಗುತ್ತದೆ.

ಈತನ ಹೆಸರಿನ ಒಳದನಿಯನ್ನಷ್ಟು ಸಮೀಕ್ಷಿಸಿದರೆ ಹರಿದಾಸರ ದೃಷ್ಟಿ ಎಷ್ಟು ವಿಶಾಲವೆಂಬುದು ತೋರದೇ ಇರದು, ಎಂದರೆ ಶ್ರೀನಿವಾಸ ಎಂಬ ಪದದಲ್ಲಿ, ಅಣು ಮತ್ತು ಮಹತ್ತಿನ ಎಲ್ಲ ನಿಲುಕುಗಳು ಅಡಕವಾಗಿವೆಯೆಂಬುದನ್ನು ಅರಿತುಕೊಳ್ಳಲು ಸಾಧ್ಯವಾದೀತು : "ಶ್ರೀ" ಎಂದರೆ ಮಂಗಳ ಸಂಪತ್ತು ಇತ್ಯಾದಿ. ಈ ಅರ್ಥಗಳಿಗೆ ಬೆಳಕು ಬರಬೇಕಾದರೆ ಮನುಷ್ಯ ಶ್ರಮಜೀವಿಯಾಗಿರಬೇಕು. ವಿವೇಕಿಯಾಗಿರಬೇಕು, ಸಹಜೀವನ ಸತ್ವನಾಗಿರಬೇಕು, ಆನಂದಿಯಾಗಿರಬೇಕು, ಎಂದರೆ ಮಾತ್ರ ಬದುಕು ಮಂಗಳಮಯವಾಗಿರುತ್ತದೆ. ಇಂತಹ ಬದುಕನ್ನು ಹೊಂದಿದ ದೇಹವೇ, ಆ ಶಕ್ತಿಗೆ ನಿವಾಸವಾಗುತ್ತದೆ. ಹೀಗೆ ಹನಿಹನಿ ಗೂಡಿ, ಒಂದೊಂದು ಸೇರಿ ಪೋಣಿಕೆಯಾಗಿ ಸೌರವ್ಯೂಹವಾಗುತ್ತದೆ. ವಿಶ್ವವೇ ಆಗುತ್ತದೆ. ಹೀಗೆ ಬದುಕಿಗೆ ಇಂತಹ ಅರ್ಥವನ್ನು ನೀಡಿದ ಆ ಶ್ರೀನಿವಾಸನ ಮೇಲಿನ ವಿಶ್ವಾಸವು ಇಂದಿಗೂ ಅಸಂಖ್ಯಾತ ಭಕ್ತರನ್ನು ಸೂರೆಗೊಂಡಿದೆ. ಅಂತೆಯೇ ತಿರುಪತಿ - ತಿರುಮಲೆಗಳಲ್ಲಿ ನಿತ್ಯೋತ್ಸವ. ನಿತ್ಯ ಮಂಗಲ. ಅದು ಭೂ ವೈಕುಂಠ.

ಈ ಗೂಢಾರ್ಥವವನ್ನು ಅರಿತ ಹರಿದಾಸರು ತಿರುಪತಿಯ ತಿಮ್ಮಪ್ಪನಾಗಿರುವ ಶ್ರೀನಿವಾಸನೆಂದರೆ ಮೈಮರೆಯುತ್ತಾರೆ. ಕೃಷ್ಣನ ವಿರಾಟ ಸ್ವರೂಪವನ್ನು ಕಂಡಾಗಿನ ಭಕ್ತರ ಪಾಲಿನ ಸ್ಥಿತಿ, ಅವರದಾಗಿರುತ್ತದೆ. ತಿರುಪತಿಯಿಂದ ಬೆಟ್ಟವೇರಿ, ತಿರುಮಲೆಯಲ್ಲಿಯ ವೆಂಕಪ್ಪನನ್ನು ಕಂಡಾಗ ಈ ಹರಿದಾಸರೆಲ್ಲ ಅರ್ಜುನರಾಗಿ ಬಿಡುತ್ತಾರೆ. ಹೀಗಾಗಿ ಅಲ್ಲಿ ಆತ್ಮಜ್ಞಾನವು ಸದಾ ಅರಳಿಕೊಂಡಿರುವ ಸ್ಥಿತಿಗೆ ಆ ದಾಸರೆಲ್ಲ ನಿಲುಕಿ, ಇಂದಿಗೂ ಆ ದಾರಿಯಿಂದ ಬರಲು ಎಲ್ಲರಿಗೂ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಏಕೆಂದರೆ ಹರಿದಾಸರೆಲ್ಲ ತಮ್ಮ ಅನುಭವದ ಸಾಗರವನ್ನು ಅಚ್ಚಗನ್ನಡದಲ್ಲಿ ದೇಸೀಯವಾಗಿ ಹಿಡಿದಿಟ್ಟಿರುವುದರಿಂದ ಹರಿದಾಸ ಮಾರ್ಗವು ಸುಲಭವಾಗಿ ಎಲ್ಲರ ಕೈನಿಲುಕು ಆಗಿದ್ದು ಅರ್ಜುನನಿಗೆ ವಿರಾಟ್ ಸ್ವರೂಪ ದರ್ಶನದ ಅನಂತರ ಬಂದ ವಿಸ್ಮೃತಿಯಂತಹ ಹೆದರಿಕೆ ಹರಿದಾಸನ ಮುಖಾಂತರ ಶ್ರೀನಿವಾಸನನ್ನು ಕಂಡಾಗ ಹಾರಿಹೋಗುತ್ತದೆ. ಈ ದೃಷ್ಟಿಯಿಂದಲೇ ಏನೋ ಎಲ್ಲ ಹರಿದಾಸರು ಶ್ರೀನಿವಾಸನನ್ನು ಅಪ್ಪಿಕೊಂಡು ಹಾಡಿದ್ದಾರೆ. ಹಾಡಿ ಕುಣಿದಿದ್ದಾರೆ. ನಿಂದಾಸ್ತುತಿಗಳಲ್ಲಂತೂ ಆತ್ಮವಿಶ್ವಾಸವನ್ನು, ಕ್ರಿಯಾಶೀಲತೆಯನ್ನೂ ಆತ್ಮೀಯ ಬಂಧುವೆಂದು ಸ್ವೀಕರಿಸಿ ಸಧುರವಾಡಿದ್ದಾರೆ.

ಶ್ರೀಪಾದರಾಯರು, "ಏನ ಪೇಳಲಿ ದೇವ ನಾ ಮಾಡಿದ ಕರ್ಮ ನಾನಾ ವಿಚಿತ್ರ ವೈ ಶ್ರೀನಿವಾಸ" ಎಂದು ಅಂತರಂಗ ಪರಿಶೀಲನೆಗೆ ತೊಡಗಿ, ಆತನ ದಯೆಗಾಗಿ, "ಸಾಗಿ ಬಾರಯ್ಯ ನೀ : ಬಾಗಿನಮಿಸುವೇ : ಯೋಗಿಗಳರಸನೇ ಶ್ರೀನಿವಾಸ" ಎಂದು ಮೊರೆಯಿಟ್ಟಿದ್ದಾರೆ. "ಭೂಷಣಕ್ಕೆ ಭೂಷಣನಾದ ಶೇಷಗಿರಿವಾಸ ಶ್ರೀನಿವಾಸ ಎಂದೆಂದು ಕಾರುಣ್ಯಸಿಂಧು" ಎಂದು ಮನವಾರೆ ಕೊಂಡಾಡಿದ್ದಾರೆ. ರಂಗವಿಟ್ಠಲನೇ ಈ ಶ್ರೀನಿವಾಸನೆಂದು ವೆಂಕಟಶೈಲ ವಲ್ಲಭನೆಂದು ಗುರುತಿಸಿದ್ದಾರೆ.

ವಾದಿರಾಜರು, ಶ್ರೀನಿವಾಸನು ತಮಗೆ ನೆನಹಿನಲ್ಲಿ ಸದಾ ಶ್ರೀನಿವಾಸನಾಗಿ ನೆಲೆಸಬೇಕೆಂದು ಅಪೇಕ್ಷೆಪಟ್ಟು, "ಸಾರಿದೆ ನಿನ್ನ ವೆಂಕಟರನ್ನ : ಕಾಯದೇಕೆನ್ನ : ನೀರಜನಾಭನೆ ನಿರ್ಮಲ ಚಿತ್ತ ಗುಣಸದನ" ಎಂದು ಮೊರೆಯಿಡುತ್ತ "ನೀನಾಗಿ ದಯ ಮಾಡು" ಎಂದು ಕರೆದಿದ್ದಾನೆ. ಆ ಕರೆಯುವಿಕೆಯಲ್ಲಿ ಸ್ವಾಭಿಮಾನದ ಜೋರು ಕಾಣುತ್ತದೆ. ಏಕೆಂದರೆ ನಿಷ್ಠಾವಂತ ಭಕ್ತನಿಗೆ, ದೇವರ ಬಗ್ಗೆ ಭಕ್ತಿ ಇರು

ತ್ತದೆಯಷ್ಟೇ ಅಲ್ಲ ಸಲುಗೆಯೂ ಇರುತ್ತದೆ. ಆ ಸಲುಗೆಯೇ ಆ ಜೋರಿನ ಸ್ವರೂಪ.

ಪುರಂದರ ದಾಸರಂತೂ ಶ್ರೀನಿವಾಸನ ಮೇಲೆ ಪುಂಖಾನು ಪುಂಖವಾಗಿ ಹಾಡಿ ಕುಣಿದು ನಲಿದಿದ್ದಾರೆ. ಆತನ ಸೊಗಸಿನ ಪರಿಯನ್ನು ಎಷ್ಟು ಆತ್ಮೀಯವಾಗಿ ಬಣ್ಣಿಸಿದರೂ ಈ ದಾಸರಿಗೆ ತೃಪ್ತಿಯಿಲ್ಲ. ಸಾರ್ಥ ಶ್ರೀಮಂತ ನವಕೋಟಿ ನಾರಾಯಣನಾಮಕ ದಾಸರು, ಜ್ಞಾನೋದಯವಾದಾಗ, ಎಲ್ಲ ಚಂಚಲ ಸಂಪತ್ತನ್ನು ತ್ಯಜಿಸಿ, ಪಂಢರಪುರದಿಂದ ಯಾತ್ರೆ ಹೊರಟರು. ಯಾತ್ರೆಯಾಗಿದಂತೆ ಅನಂತ ಅನುಭವಗಳು ಈ ದಾಸರನ್ನು ಪಕ್ವ ಮನೋಸ್ಥಿತಿಗೆ ತರತೊಡಗಿದುವು. ಲೋಕ ಜೀವನದ ಅನಂತ ನಿಲುವುಗಳು ಮನವರಿಕೆಯಾದುವು. ಇಂತಹ ಯಾತ್ರೆಗಳನ್ನು ನಡೆಸಿದಾಗ ಅದೆಷ್ಟು ಸಲ ಪುರಂದರ ದಾಸರು ತಿರುಪತಿಗೆ ಬಂದಿದ್ದರೋ ಲೆಕ್ಕ ಹಾಕಲೋಡದೇಕು. ಹಾಗೆ ಬಂದಾಗಲೆಲ್ಲ ಶ್ರೀನಿವಾಸನನ್ನು ಬಣ್ಣಿಸಿದ್ದೇ ಬಣ್ಣಿಸಿದ್ದು. ಆ ಒಂದೊಂದು ಬಣ್ಣನೆ ಒಂದೊಂದು ಬಗೆಯದು. ಒಂದು ಮತ್ತೊಂದ ಂತಿಲ್ಲ. ಎಲ್ಲದರಲ್ಲಿಯೂ ಪರಮಾತ್ಮನ ಹೊಸ ಹೊಸ ಬಗೆಗಳ ಹೊಳಪು. ಎಲ್ಲ ಸೇರಿದಾಗ ಪರಿಪೂರ್ಣ ಜ್ಞಾನದ ಬೆಳಕಿನ ಕಡೆಗೆ ಜೀವದ ಸಾರ್ಥಕ್ಯದ ಪಯಣ.

ಶ್ರೀನಿವಾಸನನ್ನು "ಏಳಯ್ಯ ಬೆಳಗಾಯಿತು" ಎಂದು ಆತ್ಮೀಯವಾಗಿ ಎಬ್ಬಿಸುವುದರಿಂದ ಹಿಡಿದು 'ತುಂಗಗಿರಿ ವರಗಿರಿ ಅಪ್ಪ ತಿಮ್ಮಪ್ಪನ' ಎಂದು ಚಪ್ಪಿ ಬಡಿದು ಮಲಗಿಸುವವರೆಗೂ ನವವಿಧ ಭಕ್ತಿ ಮಹಿಮಾನುಭವಗಳನ್ನು ಆತ್ಮೀಕರಿಸಿಕೊಂಡು ಬದುಕಿನ ತತ್ತ್ವಜ್ಞಾನವನ್ನು ಸಹಜವಾಗಿ ಬಿಡಿಸಿ ಅಂಗೈನಲ್ಲಿ ಗೋಳಿಸಿದ್ದಾರೆ. ಒಟ್ಟಾರೆ ಆತನನ್ನು ತಮ್ಮ ಕುಟುಂಬದ ತೀರ ಸಲುಗೆಯ ಬಂಧುವೆಂದು ಕರೆದು ನಲಿದಿದ್ದಾರೆ. ಹಾಡಿ ಹರಸಿದ್ದಾರೆ, ಕೂಡ ಬದುಕನ್ನು ಸಾಗಿಸಿರುವರೆಂದೂ ತಪ್ಪೇನಿಲ್ಲ. "ವೇಣುನಾದ ಬಾರೊ ವೆಂಕಟರಮಣನೆ ಬಾರೊ", "ಏಕೆದಯೆ ಬಾರದೋ ಲೋಕ ನಾಯಕ ನಿನಗೆ", "ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ", "ವೈದ್ಯ ಬಂದ ನೋಡಿ ವೆಂಕಟ ನೆಂಬ ವೈದ್ಯ" ಇತ್ಯಾದಿ ಉದ್ಗಾರಗಳನ್ನು ನೋಡಿದಾಗ ವೆಂಕಟರಮಣ ಅರ್ಥಾತ್ ಶ್ರೀನಿವಾಸನನ್ನು ಹರಿದಾಸರು ಸಾಮೀಪ್ಯ ಸಾಲೋಕ್ಯ ಸಾಯುಜ್ಯಗಳಲ್ಲಿಯೂ ಸದರದಲ್ಲಿರುತ್ತಾರೆ.

ಇಂಥ ಭಾಗ್ಯವು ತಿರುಪತಿಯ ಯಾತ್ರೆಯನ್ನು ಮಾಡಿದವರಿಗೆ ಮಾತ್ರ ಸಾಧ್ಯ. ಅಂತಹ ಭಾಗ್ಯವಂತರು ಹರಿದಾಸರು. ಅವರನ್ನು ಮುಟ್ಟಲು ಯಮನಿಗೆ ಹೆದರಿಕೆ. ಅಂತೆಯೇ,

"ಮುಟ್ಟದೇಡಿ ಮುಟ್ಟದೇಡಿ
ಮುರಹರನ ದಾಸರನು
ಕಟ್ಟುಮಾಡಿದನಂತೆ ಯಮ
ತನ್ನ ದೂತರಿಗೆ ||ಪ||
ತಿರುಮಣ್ಣು ಶ್ರೀ ಚೂರ್ಣ
ಪೂರ್ಣದ್ವಾದಶನಾಮ
ಸಿರಿತುಳಸಿ ವನಮಾಲೆ
ಕೊರಳಿನೊಳಗಿಪ್ಪವರ
ತಿರುಮಂತ್ರ ತೀರ್ಥ ಪ್ರಸಾದಕೊಳಗಾದವರ
ತಿರುಪತಿಯನು ನೋಡಿದ ಮಹಾತ್ಮರನು"

ಎಂಬ ಕನಕದಾಸರ ವಾಣಿಯನ್ನು ಸ್ಮರಿಸಿಕೊಂಡಾಗ ತಿರುಪತಿಯ ಯಾತ್ರೆ ಹಾಗು ಶ್ರೀನಿವಾಸನ ದರ್ಶನದ ಮಹತ್ವವು ನಿಚ್ಚಳವಾಗುತ್ತದೆ.

ತಿರುಪತಿ ತಿರುಮಲೆಗಳ ದರ್ಶನವು ನಿತ್ಯಮಂಗಲವೇ ಹೌದು. ಅದರಲ್ಲಿಯೂ ಬ್ರಹ್ಮೋತ್ಸವದ ಸಂದರ್ಭವು ವಿಶೇಷವೆಂದರೆ ವಿಶೇಷ. ಆ ವೈಭವವನ್ನು ನೋಡಿ ಕಣ್ಣುದಣಿಯಪ್ಪು ಮನನ ಮಾಡಿಕೊಳ್ಳಲು ಮನವು ಬೇಸರಿಯದು. ಈ ಉತ್ಸವವು ಆಶ್ವಯುಜ ಶುಕ್ಲ ಪ್ರತಿಪದೆಯಿಂದ ನವಮಿಯವರೆಗೆ ನಡೆಯುತ್ತದೆ. ತೊಂಡಮಾನನು ನಿರ್ಮಿಸಿದ ಮಂದಿರದಲ್ಲಿ ವೆಂಕಟೇಶನು ಪ್ರವೇಶ ಮಾಡಿ ತನ್ನ ವಾಸಸ್ಥಾನ ಮಾಡಿಕೊಳ್ಳುವ ರೀತಿಯನ್ನು ದಾಸರೇ ಶಬ್ದಗಳಲ್ಲಿ ಹಿಡಿದಿಡದೇಕು. ಈ ಉತ್ಸವವನ್ನು ಬ್ರಹ್ಮದೇವರೇ ಬಯಸುವರು. ಇದು ಶೇಷಾಚಲದಲ್ಲಿಯೇ ನಡೆಯಬೇಕು. ಅಲ್ಲಿ ದೇವಾಧಿದೇವತೆಗಳು ವೃಕ್ಷಗಳಾಗಿ ನೆಲೆಸುವರು. ಸ್ವಾಮಿ ಪುಷ್ಕರಣಿಯೇ ದೇವಗಂಗೆ. ಇಲ್ಲಿ ವೆಂಕಟೇಶನ ಉತ್ಸವವು ಧ್ವಜಾರೋಹಣದಿಂದ ಪ್ರಾರಂಭಿಸಿ ಅವಭೃಥ ಪರ್ಯಂತ ಎಲ್ಲವೂ ಪಾಂಕ್ತವಾಗಿ ನಡೆಯುವುದು. ಈ ಎಲ್ಲ ದಿನಗಳ ಉತ್ಸವಗಳಲ್ಲಿ ಎಲ್ಲಕ್ಕೂ ಮುಂದಿನಲ್ಲಿರುವುದು ಬ್ರಹ್ಮರಥ. ಕಿಕ್ಕಿರಿದ ಭಕ್ತಸೋಮದ ಮಧ್ಯೆ ವಾಹನೋತ್ಸವಗಳು, ಜನಪದಕಲಾ ಪ್ರದರ್ಶನ, ಉಯ್ಯಾಲೆ ಮಂಟಪಗಳು, ಸಾಲುದೀಪಗಳು, ಭಜನೆಗಳು, ಕೋಲಾಟ ನೃತ್ಯಗಳು - ಈ ಎಲ್ಲ ಸಂಭ್ರಮದ ಮಧ್ಯೆ ದೇವರದೇವ ಶಿಖಾಮಣಿಯು ಬರುವ ಸೊಬಗು ನೋಡಿಯೇ ತಣಿಯದೇಕು.

ಇಂಥ ಸಡಗರದ ಮಧ್ಯೆ ಜನಕೋಟಿಯ ನೂಕಲು ನುಗ್ಗಿನಲ್ಲಿ,

"ಚೆನ್ನದ ಮುಕುಟದ
ಮಿಂಚುಗಣ್ಣಿನ ಚೆಲುವನನ್ನು,
ತೋರ ಅವಯವಗಳವ ಮಾಟವ
ಉಲ್ಲಾಸವನ್ನು, ಅಕ್ಕಪಕ್ಕದ
ಸಹಾಯಕರ ಸೊಬಗಿನ
ಸೊಬಗಿಗನನ್ನು, ವಿವಿಧ
ಚೆನ್ನಿಗನು, ತಾನು ನಿಂತುದೇ
ವೈಕುಂಠವೆಂದು ತೋರುವ
ಅಭಯ ಹಸ್ತಿಗನನ್ನು"
ನೋಡಿಯೂ ಸಂತಸ ಪಡದಿರಲು ಸಾಧ್ಯವೇ ?

ಈ ಸ್ಥಿತಿಯನ್ನು ಕಂಡ ದ್ವಿತೀಯ ಪುರಂದರದಾಸರೆಂಬ ಬಿರುದಿಗೆ ಪಾತ್ರರಾದ ಜನಪದ ಧೋರಣೆಯ ಅಪರೋಕ್ಷ ಜ್ಞಾನಿಗಳು ಆದ ವಿಜಯದಾಸರು ತಾವು ದೇವಾಲಯದ ಗರ್ಭಗುಡಿಯಲ್ಲಿರುವ ಶ್ರೀನಿವಾಸನ ದರ್ಶನಕೆ ಬಂದವರಲ್ಲವೆಂದು, ಆತನನ್ನು ನಂಬಿದ ಪುಣ್ಯವಂತರ ದರುಶನಕೆ ಬಂದವರೆಂದು ಸದರವಾಡುತ್ತಾರೆ. ಆ ವ್ಯಂಗ್ಯವಲ್ಲಿ ಪರಮಾತ್ಮತ್ವದ ಮಹತಿಯು ಅಂಗೈನಲ್ಲಿಯಾಗಿ ಬಿದುತ್ತದೆ. ಹಾಗಾದಾಗ ಆ ಹಾಡಿನಲ್ಲಿ ತುಂಬಿ ತುಳುಕುವ ದೆಳ್ಳಂ ದೆಳಕಿನ ರುಚಿಯನ್ನು ಮೆಲುಕು ಹಾಕುವುದೂ ಕೂಡ ಬ್ರಹ್ಮೋತ್ಸವದ ಸೊಗಸನ್ನು ನೇರವಾಗಿ ಅನುಭವಿಸಿದುದಕ್ಕಿಂತ ಕಮ್ಮಿಯದೇನಲ್ಲ.

"ನಿನ್ನ ದರುಶನಕೆ ಬಂದವನಲ್ಲವೋ, ದೇವ
ಪುಣ್ಯವಂತರ ದಿವ್ಯಚರಣ ನೋಡಲು ಬಂದೆ
ಇಲ್ಲಿಗೆ ಬರುವ ಕಾರಣವಾವುದೋ
ಕಲ್ಲಿಗೆ ಸ್ತಂಭದಲ್ಲಿ,
ತೋರಿದ ಮಹಾಮಹಿಮ
ಎಲ್ಲಿಲ್ಲವೋ ನೀನು ಬಲ್ಲ ಭಕ್ತರಿಗೆ"

ಎಂದು ಕೇಳುವಾಗ ಭೂವೈಕುಂಠವೆಂಬುದು ಪ್ರತಿಯೊಂದು ಭಗವದ್ಭಕ್ತಿಯ ವಸ್ತುವಿನಲ್ಲಿದೆ: ಆದ್ದರಿಂದ ಗರ್ಭಗುಡಿಗೆ ಹೋಗಿ ಆತನ ದರ್ಶನ ತೆಗೆದುಕೊಳ್ಳುವುದರಲ್ಲಿ ಅದ್ಯಾವ ಪುರುಷಾರ್ಥವಿದೆ. ಏಕೆಂದರೆ ಭಗವಂತ ಭಕ್ತ ಜನಪ್ರಿಯ, ಜನತಾ ಜನಾರ್ದನನಲ್ಲವೇ ? ಹೀಗೆ ಎಂತಹ ಬಿಕ್ಕಟ್ಟಿನ ಪ್ರಮೇಯವನ್ನು ಬಿಡಿಸಿ ಹೇಳಿದರಲ್ಲ ದಾಸರು ಎಂದು ಬೆರಗು ಆವರಿಸುತ್ತದೆ.

ವಿಜಯದಾಸರಂತೆ ಗೋಪಾಲದಾಸರು ಶ್ರೀನಿವಾಸನ ಮಹಿಮೆಯನ್ನು ಕೊಂಡಾಡುವುದರಲ್ಲಿ ಹಿಂದೆ ಬೀಳುವುದಿಲ್ಲ. "ದೀನರಕ್ಷಕ ನಿನ್ನಾಧೀನದವ ನಾನು, ದಾನ ಬೇಡಿದೆ ನಾ ಧರ್ಮವಂತ" ಎಂದು ಸಮರ್ಪಣ ಭಾವವನ್ನು ಅಭಿವ್ಯಕ್ತಗೊಳಿಸಿದ ಗೋಪಾಲದಾಸರು, "ನೀನು ಎನ್ನನು ಎಲ್ಲಿ ನಿಲಿಸಿದ ಸ್ಥಳವೆಲ್ಲ, ಶ್ರೀನಿವಾಸನೆ ನಿನಗೆ ಅದೆ ಪೀಠವು" ಎಂಬಲ್ಲಿ ಶ್ರೀನಿವಾಸ ತತ್ವದ ಭೌಮತ್ವವನ್ನು ಸೂರೆಗೊಳಿಸಿದ್ದಾರೆ. ಸ್ವಾಮಿಭೃತ್ಯ ಅನುಸಂಧಾನದಿಂದ ಮಾತ್ರ ಶ್ರೀನಿವಾಸ ಇದರಿಂದೊಲಿ

ನು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಆಸೆಯ ಡಿಸಿ, ಮಿಾಸಲು ಮನಸಮಾಡಿ ಶ್ರೀನಿವಾಸನ ಸುಳಿ ನಿಂದ ಆತನ ಕೃಪೆ ಪಡೆಯದೇಕೆಂದು ಸಾರಿ ದ್ದಾರೆ. "ಜ್ಞಾನಿಗಳ ಪಾದದಡಿಯಲ್ಲಿ ನಾನು ಬಿದ್ದ ನು ಎಂದು, ನೀನೆ ನೋಡಿ ಸಾಕಬೇಕು ಶ್ರೀನಿ ವಾಸ ದಯಾಂಬುಧಿ" ಎಂದು ಸದ್ಗತಿಯನ್ನು ಪಡೆ ಯುವ ದಾರಿ ತೋರಿದ್ದಾರೆ. ಮತ್ತೆ ಇದು ಗುರುಮು ಖೇನ ದೊರೆಯದೇಕು ಎಂಬುದಕ್ಕೆ "ಎನ್ನಂತರಂ ಗದ ಮನೆಗಿನ್ನು ಮಾಳಿಗೆ ಶ್ರೀನಿವಾಸಾರ್ಯರ ಮನೆ ಯಿಂದ ಶೀಲ ಗುರು ವಿಜಯರಾಯರಿಗೆ ಒಲಿದು ಮೇಲಾಗಿ ಬಹುಪರಿಗಳಿಂದ ಪೂಜೆಯಗೊಂಡು ಕೇಳು ಮನುಜನ ಎನ್ನ ಪಾಲಿಸಲು ದೇಕೆಂದು" ಶ್ರೀ ಶ್ರೀನಿವಾಸ ಗೋಪಾಲವಿಟ್ಟಲ ವಿಜಯನನ್ನು ಕೇಳಿ ಕೊಂಡಿದ್ದಾರೆ. ಈ ಮಾತಿನ ಮರ್ಮದಲ್ಲಿ ಗುರು ಮಹತಿಯು ತುಂಬಿ ತುಳುಕಿದೆ. ಈ ರೀತಿ ಭಕ್ತಿ ಗಂಗೆಯಲ್ಲಿ ಮಹಿಮೆಯನ್ನು ಅರಿತ ಗೋಪಾಲ ದಾಸರಿಗೆ ಶ್ರೀನಿವಾಸನ ಜೊತೆ ತುಂಬ ವಿಶ್ವಾಸವನ್ನು ಸಂಪಾದಿಸಿದರು. ಅಂತೆಯೇ ಅವರು ಬ್ರಹ್ಮೋತ್ಸ ವಕ್ಕೆ ಬಂದಾಗ, ಶ್ರೀನಿವಾಸನನ್ನು ಕುರಿತು,

"ಶ್ರೀರಮಾಪತಿ ಶ್ರೀನಿವಾಸ ವೆಂಕಟರಮಣ,
ಯಾರು ಇಟ್ಟರೊ ನಿನಗೆ ಮೂರು ನಾಮಗಳ"

ಎಂದು ಕ್ಷೇಮ ಸಮಾಚಾರ ಕೇಳಿ, ಶ್ರೀನಿವಾಸನ ಮೂರು ನಾಮಗಳ ಗುಟ್ಟನ್ನು ಬಹಿರಂಗಗೊಳಿ ಸುವ ಶೈಲಿಯು ಧ್ವನಿಸಾಮೀಪ್ಯತೆಯಿಂದ ಭಕ್ತರ ಮನ ಸ್ಸನ್ನು ಪಾವನಗೊಳಿಸುತ್ತದೆ.

ಗೋಪಾಲದಾಸರಿಂದ ಆಯುರ್ದಾನವನ್ನು ಪಡೆದ ಜಗನ್ನಾಥದಾಸರು, 'ಶ್ರೀ' ನಿವಾಸನನ್ನು "ವೆಂಕಟೇಶ ಕಾಯೋ ಕಿಂಕರನಿವನೆಂದು" ಎಂದು ಮೊರೆಯಿಡುತ್ತ, "ಶ್ರೀ ವೆಂಕಟಾಚಲ ನಿವಾಸ ನಿನ್ನ ಸೇವಾನು ಸೇವಕರ ದಾಸ ಎನಿಸಿ : ಜೀವಿಸುವ ನನಗೆ ಆಯಾಸಾ ಯಾಕೆ : ಶ್ರೀವರನೆ ಕೊಡು ಎಮಗೆ ಲೇಸಾ" ಎಂಬ ಮಾತುಗಳಲ್ಲಿ ಸಮರ್ಪಣಾ ಭಾವವು ಆರ್ತತೆಯೊಡನೆ ಮೇಳವಿಸಿದ್ದು ಅಂತ ರಂಗ ಪರಿಶೀಲನೆಗೂ ಅಲ್ಲಿ ಇಂಬುದೊರೆತಿದೆ. ಈ ಕೀರ್ತನೆಯು ೪೭ ನುಡಿಗಳಲ್ಲಿದ್ದ ಭಾವಗಳ ಒಳ ಅಲೆಗಳನ್ನು ಗುರುತಿಸಲು ಪ್ರಯತ್ನಿಸುವಲ್ಲಿ ಸಹಾಯ ಮಾಡುತ್ತದೆ. ಮುಂದೆ ಚಿಂತನೆಗೆ ತೊಡ ಗಿದಾಗ, ಶ್ರೀ ವೆಂಕಟ ಶೈಲಾಧಿಪ ನಮೋ ರಾಜೀ ವಭವ ಭವಾರಾಧ್ಯ ನಮೋ, ಎಂಬ ಕೀರ್ತನೆಯ ಒಳಧ್ವನಿಯಿಂದ ಪಲ್ಲವಿ ರಿಂಗಣವಾಗಿ ಅದೂ "ದಾಸೋಹಂ" ತತ್ವಕ್ಕೆ ವಿರಳವಾದ ಅರ್ಥ ಸ್ಪಷ್ಟವಾ ಗಲು ಅನುಕೂಲವಿಸುತ್ತದೆ. ಆ ಅರ್ಥದ ಬೆಳಕಿ ನಲ್ಲಿ "ಶ್ರೀನಿವಾಸನ ಪೋಲ್ವ ದೀನ ವತ್ಸಲರುಂಟೆ ದಾನಿಗಳುಂಟೆ ಜಗದೊಳು : ಜಗದೊಳು ನೀನೆ ಗತಿಯೆಂದ ನರನಿಗೆ : ಆನಂದವೀವೆ ಅನುಗಾಲ" ಎಂಬ ಸುವ್ವಾಲಿಯು ಆಶ್ವಾಸವನ್ನಿತ್ತು ಭಗವಂತ ನಲ್ಲಿ ವಿಶ್ವಾಸವನ್ನು ಸಾವಿರದ ಮಡಿಗೆ ಮುಟ್ಟಿಸು ತ್ತದೆ. ಆ ವಿಶ್ವಾಸವೇ ಜಗನ್ನಾಥತತ್ವವನ್ನು ನಿಚ್ಚಳ ಗೊಳಿಸುತ್ತದೆ.

ಪ್ರಸನ್ನ ವೆಂಕಟದಾಸರು -

"ಸಂಗವಾಗಲಿ, ಸಾಧು
ಸಂಗವಾಗಲಿ ಸಂಗದಿಂದ
ಲಿಂಗದೇಹ ಭಂಗವಾಗಲಿ,....."

ಎಂಬುವಂತಹ ಮಾತುಗಳನ್ನು ತಮ್ಮ ನಿತ್ಯ ಅನು ಷ್ಠಾನದಲ್ಲಿ ಸಾಕ್ಷೀಕರಿಸಿ ಕೇಳುತ್ತ ತೀರ್ಥ ಕ್ಷೇತ್ರ ಯಾತ್ರೆಗೆ ತೊಡಗಿದಾಗ, 'ಪ್ರಸನ್ನ ವೆಂಕಟ' ಎಂಬ ಅಂಕಿತವು ಸಾರ್ಥಕವಾಗುವಂತೆ ಶ್ರೀನಿವಾಸನನ್ನು ಅವರು 'ಶ್ರೀನಿವಾಸ ಅನಿಮಿಷಮುನಿ', 'ಅನಿಮಿತ್ತ ಬಂಧು', 'ಎನ್ನ ತಂದೆ ಎನ್ನ ತಾಯಿ', 'ಗೋವಿಂದಾ ಗೋವಿಂದಾ' ಎಂದು ತಮ್ಮ ನೋಡದೆ ಬಂದೆಯಾ ಶೇಷಾದ್ರಿವಾಸ ಸುರೇಶ; ವೆಂಕಟೇಶ ಶ್ರೀ ವೆಂಕ ಟೇಶ ಎಂದು ಆರ್ತಭಾವನೆಯಿಂದ ಕೊಂಡಾಡಿ, ಆತನ ಮಹಾತ್ಮ್ಯಜ್ಞಾನವನ್ನು ಅಂತಃಕರಣದಿ ತುಂಬಿ ಕೊಂಡು 'ಬಿಡಲಾರೆ ಬಿಡಲಾರೆ ನಿನ್ನ' ಎಂದು ಆತ ನಲ್ಲಿ ತಮ್ಮ ಭಾವವನ್ನು ಬಿಂಬಿಸಿ ಆತ್ಮೀಯತೆಯನ್ನು ತೋರಿ 'ಶ್ರೀ ವೆಂಕಟೇಶನ ಬಿಡಬ್ಯಾಡಿ' ಎಂದು ತಮ್ಮಂತೆ ಜನತೆಗೂ ಲಾಭವಾಗಲೆಂದು ಜನಹಿತ ಹಿತಕ್ಕಾಗಿ ಸಕಲಜೀವಿಗಳಲ್ಲಿಯೂ ಪ್ರಾರ್ಥನೆ ಸಲ್ಲಿ ಸಿದ್ದಾರೆ. ದುಡಿತದಲ್ಲಿ ಜೀವರಿದ್ದಾಗಲೇ ಕಂಡು, 'ಬಿಡೆನೋ ನಿನ್ನಂಘ್ರಿ ಶ್ರೀನಿವಾಸ, ಎನ್ನ ದುಡಿಸಿ ಕೊಳ್ಳಿರೋ ಶ್ರೀನಿವಾಸಾ" ಎಂದು ಅರ್ಥವತ್ತಾದ ಮಾತುಗಳನ್ನು ಹೇಳಿದ್ದಾರೆ.

ಇಂಥ ಮಹಾನುಹಿಮ ಶ್ರೀನಿವಾಸನನ್ನು ಕಣ್ಣಿಗೆ ಕಟ್ಟುವಂತೆ ಮನದಲ್ಲಿ ನಾಟನಿಲ್ಲುವಂತೆ ಪ್ರಸನ್ನ ವೆಂಕಟದಾಸರು ಹಲವಾರು ಸಲ ಕೀರ್ತಿಸಿದ್ದಾರೆ. ಆ ಎಲ್ಲ ಕೀರ್ತನೆಗಳು ವೈವಿಧ್ಯಮಯ ಚಿತ್ರಗಳಿಂದ ಅಂತರಂಗಕ್ಕೆ ಭಾವಸ್ಪರ್ಶ ಮಾಡಿಸಿದರೂ ಎಲ್ಲದರ ಮೂಲಝರಿ ಭಕ್ತಿ. ಆ ಭಕ್ತಿಯ ಅಭಿವ್ಯಕ್ತಿಯಲ್ಲಿ ಬದುಕಿಗೆ ಇಂಬಿದೆ. ಪುರುಷಾರ್ಥಸಾಧನೆಗೆ ಅವ ಕಾಶವಿದೆ. ನೆಲದಲ್ಲಿಯ ಬದುಕಿನ ಮೂಲ್ಯಗಳಿಗೆ ಹೊಳಪಿದೆ. ಅಂತಹ ಒಂದು ಅಮೂಲ್ಯ ಕೀರ್ತನೆ ಇಂತಿದೆ.

ಪುಸ್ತಕದೊಳೊಪ್ಪುವ ಮಾಣಿಕ ಮುಕುಟದ
ಕಸ್ತೂರಿ ನಾಮದ ಚೆಲುವಾ
ವಿಸ್ತರಕದಪಿಲಿ ಹೊಳೆವ ಕುಂಡಲ ಪ್ರಾ
ಶಸ್ತವದನ ಜಗಜೀವಾ

ಎಂದು ಆರಂಭವಾಗಿ, ಜೀವನದಲ್ಲಿ ಸಾಮರಸ್ಯ ತತ್ವಕ್ಕೆ

ಎಳೆಸಗೆತಿಂಗಳಕಾಂತೇಲಿ ಹೃತ್ತಾಪ
ಕಳೆವ ಕರುಣಾ ಸಿರಿಕಾಂತಾ
ಗಳದೊಳು ವನಮಾಲೆ ವೈಜಯಂತಿ ಪದಕಗ
ಳೊಲೆವಾ ಮಂಗಳ ಮೂರ್ತಿ ಮಂತಾ

ಎಂದು ಇಂಬು ಒದಗಿಸಿ, ಆ ಮೂಲಕ ಆತ ರಸಿಕಚಕ್ರಿಯಾಗಿ ಕಂಡಾಗ ಭಕ್ತನ ದರ್ಶನಕ್ಕೆ ವೆಂಕ ಟರಮಣನ ಅಭಯ ವರದ ಹಸ್ತ ಕಾಣುವಂತೆ ಈ ಕೀರ್ತನೆ ಆತ್ಮವಿಶ್ವಾಸವನ್ನು ಬೆಳೆಸಿದೆ. ಇಂಥ ಈ ಕೀರ್ತನೆಯ ಕವಚವನ್ನು ನೋಡಿದರೆ ಈ ದಾಸರು ಬ್ರಹ್ಮೋತ್ಸವದಲ್ಲಿ ವೆಂಕಟೇಶನ ಸೊಬಗನ್ನು ಕಂಡು ತೃಪ್ತರಾಗಿ ಈ ಕೀರ್ತನೆಯನ್ನು ಹಾಡಿರಬೇಕೆನ್ನಿಸು ತ್ತದೆ. ಬಹುಶಃ ಬ್ರಹ್ಮೋತ್ಸವಕ್ಕೆ ಬಂದ ಭಕ್ತರಿಗೆಲ್ಲ ಈ ದರ್ಶನ ತೃಪ್ತಿಯಿಂದಾಗಿ ಆ ಭಕ್ತರ ಬಾಳೆಲ್ಲ ಸಾರ್ಥ ಕವಾಗಲೇಬೇಕು. ಅಂತಹ ಭಕ್ತನಿಗೆ ಸ್ವರ್ಗ ಇಲ್ಲವೆ ವೈಕುಂಠ ಇತ್ಯಾದಿಗಳು ಬೇಕೇ ಇಲ್ಲ. ಅವರಿಗೆ ಅದೆಲ್ಲ ಸುಮ್ಮನೆ. ಭೂ ವೈಕುಂಠವೇ ಮನೆ.

ಈ ಹಿನ್ನೆಲೆಯಲ್ಲಿ ಹರಪನಹಳ್ಳಿ ಭೀಮವ್ವನ ವರ 'ಅಷ್ಟ ಕೆಂಕೋಟಿನ ನೇತ್ರದಲಿ ನೋಡಿ ಪವಿ ತ್ರಳಾದೆ ಇಂದಿಗೆ' ಎಂಬ ಪಲ್ಲವಿಯೊಡನೆ ಆರಂ ಭವಾಗುವ ಕೀರ್ತನೆಯು ವೆಂಕಟೇಶನ ಅವತಾರ ಮಹಿಮೆಗಳನ್ನೆಲ್ಲ ಜಾಲಾಡಿಸಿ, ದಾಸೋಹಂ ಭಾವ ದಿಂದ ಜಾಗೃತಿಯಾಗಿ ಪ್ರಕೃತಿ ಪುರುಷರ ಸಾಕ್ಷಾ ತ್ಕಾರ ಅಲ್ಲಿಯೇ ಅನವರತ ಅಲ್ಲೆಯಲ್ಲಿಯೇ ಸಲಿ ಲವಾಗಿ ನಿಲ್ಲುತ್ತದೆಂದು ತೋರಿಸಿಕೊಡುತ್ತದೆ. ಅದ ಕ್ಕೆಂದು ಕುರುಹು ಎಂತಹದೆ "ಕಳಗಳಲ್ಲಿಟ್ಟು ಕಂಕಣ ಕಡಗ ಭುಜಕೀರ್ತಿ ವರಶಂಖ ಚಕ್ರಧಾರಿ, ಗಿರಿಯೆ ಭೂಕುಂಠವೆಂದು ತೋರುತ ನಿಂತ" ವೆಂಕಟರಮ ಣನೇ ಕುರುಹು. ಇದಕ್ಕಿಂತ ಹೆಚ್ಚಿನ ಕುರುಹು ಬೇಕೆ?

ಇಂಥ ಈ ಶ್ರೀನಿವಾಸ ಅರ್ಥಾತ್ ವೆಂಕಟರಮ ಣನು ಜಗದ ಬದುಕಿನ ಸತ್ಯಾಂಶನಾಗಿ, ಜಗತ್ತೂ ಸತ್ಯ ಎಂಬುದನ್ನೂ ಜಗದ ಜೀವಿಗಳಿಗೆ ವಿಶ್ವಾಸ ಹುಟ್ಟಿಸಿ, ಚೇತೋಹಾರಿ ಪ್ರಪಂಚವನ್ನು ಕ್ರಿಯಾತ್ಮ ವಾಗಿ ನಡೆಸುವಲ್ಲಿ ಸಾವಿರಕೋಟಿ ಸೂರ್ಯಪ್ರ ಭೆಯಾಗಿದ್ದಾನೆ. ಈ ಚೇತನಾಂಶವನ್ನು ಗುರು ತಿಸಿಯೇ ಹರಿದಾಸರೆಲ್ಲ ಶ್ರೀನಿವಾಸನು, ಕಷ್ಟ ಸುಖಗಳನ್ನು ಮೀರಿದ ಆನಂದದಾಯಿ ಮಂಗಲ ಸ್ವರೂಪಿ ಎಂದು ಪ್ರಸಂಗ ಸಿಕ್ಕಾಗಲೆಲ್ಲ ವೆಂಕಪ್ಪನಗಿ ರಿಗೆ ಯಾತ್ರೆ ಹೋದದ್ದೇ ಹೋದದ್ದು. ಬ್ರಹ್ಮೋತ್ಸ ವವನ್ನು ನೋಡಿದ್ದೇ ನೋಡಿದ್ದು. ನೋಡಿ ತನ್ಮಯ ರಾಗಿ ಹಾಡಿದ್ದೇ ಹಾಡಿದ್ದು. ಆ ಹಾಡುಗಳಿಗೆ ಒಲಿದು ಶ್ರೀನಿವಾಸನು ಅವರು ಸ್ಮರಿಸಿದೊಡನೆ, ಬ್ರಹ್ಮೋ

# ತಿರುಮಲೆ ತಿರುಪತಿ ದೇವಸ್ಥಾನಗಳು

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್, ಐ.ಎ.ಎಸ್.,**

**ಕಾರ್ಯನಿರ್ವಹಣಾಧಿಕಾರಿ.**

**ಪ್ರಿಯ ಭಕ್ತ ಬಂಧುಗಳೇ;**

**ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದ ವರಿಗೆ ಅಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆ ಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.**

**ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾ ದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.**

**ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾ ಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹು ತೇಕ ಯಾತ್ರಿಕರು ಹೊಂದುತ್ತಿದ್ದಾರೆ.**

**ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿ ಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ; ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿ ಸಿದೆ. <u>ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು;</u> ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವ ರಾಗುತ್ತೀರಿ.**

**ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾ ನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.**

**ಅನ್ನೇಶ್ರಿತಾನಿ ಭೂತಾಸಿ ಅನ್ನಂ ಪ್ರಾಣಮಿತಿ ಶ್ರುತಿ:**
**ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:**

**--ಬೋಧಾಯನ ಧರ್ಮಸೂತ್ರ.**

**ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.**

**ವಂದನೆಗಳೊಡನೆ ತಮ್ಮ ವಿಶ್ವಾಸಿ,**

**ಎಸ್. ರಮೇಶ್‌ಕುಮಾರ್**

ತ್ಸವ ಸ್ವರೂಪಿಯಾಗಿಯೇ ಸಡಗರದಿಂದ ಬಡ ಬಡನೆ ಭೂಮಿಗೆ ನಡೆದು ಬಂದು ಬಿಡುತ್ತಾನೆ. ಆ ಸಡಗರವನ್ನು ಎಲ್ಲ ಹರಿದಾಸರೂ ಹಿಡಿದಿಟ್ಟಿರುವ ರೀತಿ ನಿತ್ಯ ನೂತನ. ಈ ಮಾದರಿಯ ಗೋಪಾ ಲದಾಸರ ಕೀರ್ತನೆಯಂತೂ ನಾದ ಮಾಧುರ್ಯ ದಿಂದ ಭೂವೈಕುಂಠದಲ್ಲಿ ಪರಮಾತ್ಮನನ್ನು ಕುಣಿಸಿ ಬಿಡುತ್ತದೆ. ಆ ಕುಣಿತದಲ್ಲಿ ಕುಟುಂಬ ಜೀವನದ ಸ್ವಾರಸ್ಯವು ತುಂಬಿ ತುಳುಕುತ್ತಿರುತ್ತದೆ.

ನಡೆದು ಬಾರಯ್ಯ ನೀನು ವೆಂಕಟರಾಯ ||ಪ||

ನಡೆದು ಬಾರಯ್ಯ ಭವ ಕಡಲಿಗೆ ಕಂಭಸಂಭವ
ಸಡಗರದಿಂದ ನೀ ಮೆಲ್ಲಡಿಯನಿಡುತ ಬೇಗ
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೇ ಬಾ ಮೃಡ ಸಖವೆಂಕಟ ||ಅ.ಪ||

ವಿಜಯದಶಮಿ ಆಶ್ವೀಜ ಮಾಸಶುದ್ಧದಲ್ಲಿ
ನಿಜರಥ ರೂಢನಾಗಿ ಸುಜನರಿಂದೊಡಗೂಡಿ
ಗಜಹಂಸಮಯೂರ ದ್ವಿಜಸಿಂಗ ಸಾರಂಗ
ಮಜಭಾಪುರೆ ಎನಲು ತ್ರಿಜಗವು ತಲೆದೂಗೆ
ಅಜನುಸ್ತುತಿಯ ಮಾಡೆ ಋಜುಗಣಾಧಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ
ಭುಜಗ ಶ್ರೇಷ್ಠಾನುದ್ವಜ ಜಯವೆನ್ನೆ
ಕುಜನರೆದೆಯ ಮೆಟ್ಟಿ ರಜತಮಕಳೆಯುತ

ಹೀಗೆಂದು ಈ ರೀತಿ ಬರಬೇಕಾದ ಪರಮಾತ್ಮ ನನ್ನು ಆಹ್ವಾನಿಸಿದಾಗ ಆ ಪರಮಾತ್ಮನೇನಾದರೂ ಬರಲು ಒಂದು ಕ್ಷಣ ತಡವಾದರೆ 'ಶರಣಾಗತ ರಕ್ಷವರಮಣಿ ಎಂದು ಬಿರುದು ಬೇಕಾದರೆ ಸರ್ರನೆ ಬಾರಯ್ಯ' ಎಂದು ಎಚ್ಚರಿಕೆ ನೀಡಿದ ದಾಸರ ವಾಣಿ ಯಲ್ಲಿ ವಾತ್ಸಲ್ಯ ಮಮತೆ, ಸುಧೆಯಿದೆ. ಅಂತೆಯೇ ಶ್ರೀನಿವಾಸನ ಬೆಟ್ಟದ ಯಾತ್ರೆಯೊಳಲ್ಲ, ಬದುಕಿನ ಬ್ರಹ್ಮಾಂಡದಲ್ಲಿಯ ಪ್ರಕೃತಿ ಪುರುಷರ ಸಾಕ್ಷಾತ್ಕಾ ರದ ಬ್ರಹ್ಮೋತ್ಸವಗಳು. ಆ ಉತ್ಸವಗಳು, ಮಾತಿನ ಬೆಳಕಿನಲ್ಲಿ ಹಾಡಾಗಿ, ಎದೆ ತಟ್ಟಿ ಜೀವಂತಿಕೆಯನ್ನು ತುಂಬುವಲ್ಲಿ ಸಾರ್ಥಕತೆಯನ್ನು ಪಡೆದ ಉತ್ಸಾಹ ಗಳು. ಮತ್ತು ದಾಸ ಸಾಹಿತ್ಯದಲ್ಲಿಯ ಶ್ರೀನಿವಾಸನ ಕುರಿತಾದ ಇಂಥ ಸಾಹಿತ್ಯವು ನೆಮ್ಮದಿಯ ಬದುಕನ್ನು ಪಡೆಯುವ ಸಾಹಸಕ್ಕೆ ಚೇತನದ ಚಿಲುಮೆ. ಸದಾ ಚೈತ್ರದ ಚೆಲುವು ಕೂಡ.



# ಕೋಲಾರದ
# ಸೋಮೇಶ್ವರ ದೇವಾಲಯ

---ಕೆ. ಆರ್. ನರಸಿಂಹನ್.

ಹೊಯ್ಸಳ ಮತ್ತು ದ್ರಾವಿಡ ಶಿಲ್ಪ ಶೈಲಿಗಳ ಸೊಬಗು ಸುಲಕ್ಷಣಗಳ ಸಮ್ಮಿಲನ ಕೋಲಾರದ ಸೋಮೇಶ್ವರ ದೇವಾಲಯ. ಇದರ ರಚನೆಗೆ ಬಳಸಿರುವುದು ರೂವಾರಿಗಳ ಉಳಿಯ ಏಟಿಗೆ ಸುಲಭವಾಗಿ ಬಗ್ಗದಂತಹ ಗ್ರಾನೈಟ್ ಶಿಲೆಯಾಗಿದೆ. ಇದರ ರಚನೆಯಾಗಿರುವುದು ಸುಮಾರು ಆರು ಶತಮಾನಗಳ ಹಿಂದೆ ಎಂದರೆ ವಿಜಯನಗರ ಸಾಮ್ರಾಜ್ಯದ ಕೊನೆಯದಿನಗಳಲ್ಲಿ. ಪ್ರಶಸ್ತ ಕಲೆಯ ನೆಲೆಯಾದ ಈ ಆಲಯವು ಎತ್ತರವಾದ ಗೋಪುರ, ವಿವಿಧ ವಿಗ್ರಹಗಳಿಂದ ಅಲಂಕೃತವಾದ ಮಹಾದ್ವಾರ, ಸುತ್ತಿ ಬಳಸಿದ ಪ್ರಾಕಾರ, ಸಭಾಮಂದಿರ, ಕಲ್ಯಾಣ ಮಂಟಪ, ಉತ್ಸವ ಮಂಟಪ ಮತ್ತು ಪೂಜಾ ಮಂದಿರಗಳಿಂದ ಶೋಭಿಸುತ್ತಿದೆ.

ಸೋಮೇಶ್ವರ ದೇವಾಲಯದ ತಳಬಂಧವು ಸಾಲಂಕೃತ ಪಟ್ಟಿಕೆಗಳಿಂದ ಕೂಡಿದೆ. ಪಶುಪಕ್ಷಿಗಳು, ಕುಸುಮ ಯಾಳಿಗಳು ಅರೆಯುಬ್ಬಿನ ಸುಂದರ ಚಿತ್ರಸಮೂಹ ಇಲ್ಲಿನ ವಿಶೇಷ. ಪಟ್ಟಿಕೆಗಳ ಮೇಲೆ ಬಿಡಿಸಿರುವ ಹಂಸ, ಗಜಗಳ ಚಿತ್ರಗಳು ಕಲಾಸೌಧಕ್ಕೆ ಜೋಡಿಸಿಟ್ಟ ಸುಂದರ ಕುಸುಮಗಳು. ಸಾಲಾಗಿ ಮೆರವಣಿಗೆಯಲ್ಲಿ ಎಂಬಂತೆ ಇದನ್ನು ಚಿತ್ರಿಸಿರುವುದು ರೂವಾರಿಯ ಕಲಾಭಿಜ್ಞತೆಗೆ ಸಾಕ್ಷಿಯಾಗಿದೆ. ಕುದುರೆ, ಸಿಂಹ, ಟಗರುಗಳ ಕಾಳಗ ಇವೆಲ್ಲವೂ ಮತ್ತಷ್ಟು ಶೋಭಾಯಮಾನ. ಗರ್ಭಗುಡಿಯ ಹೊರಮೈ ಮೇಲಿರುವ ದೇವ, ಮುನಿ, ಅಪ್ಸರೆಯರ ಅರೆಯುಬ್ಬಿನ ಚಿತ್ರಗಳು ರಂಜನೀಯವಾದವು. ಇವುಗಳಲ್ಲಿ ಎದೆಯುಬ್ಬಿಸಿ ನಿಂತ ನಗ್ನ ಕನ್ನೆಯೊಬ್ಬಳ ಆಕೃತಿ ಆದರಣೀಯವಾದದ್ದು.

ದೇವಾಲಯಕ್ಕೆ ಶೋಭೆ ನೀಡುತ್ತಿದೆ ಇಲ್ಲಿನ ವಿಶಾಲವಾದ ಭವ್ಯವಾದ ಸಭಾಮಂಟಪ. ಎಡ, ಬಲ ಮತ್ತು ಮುಂಭಾಗಗಳಲ್ಲಿ ಕಿರಿದಾದ ಜಗಲಿಯಿಂದ ಕೂಡಿದ್ದು ಸಂಕೀರ್ಣ ಸಾಲಂಕೃತ ಕಂಬಗಳಿಂದ ಅರಳಿ ನಿಂತಿರುವುದು ಇದರ ವೈಶಿಷ್ಟ್ಯ. ಇವುಗಳ ಮಧ್ಯೆ ಸುಮಾರು ನಾಲ್ಕು ಅಡಿ ಎತ್ತರದ, ನುಣುಪುಮೈನ ಸುಂದರ ನಂದಿ ಕುಳಿತಿದೆ. ಏಕಶಿಲಾ ವಿಗ್ರಹವಾಗಿರುವ ಇದರ ಕೆತ್ತನೆಯಲ್ಲಿ ಕಲೆಗಾರ ಮೈಮರೆತಿದ್ದನೇನೋ ಎಂಬಂತಿದೆ. ಸಾಲಂಕೃತ ಕಂಬಗಳಲ್ಲಿ ಕೆಲವು ಮಿಥುನ ಶಿಲ್ಪಗಳಿಂದಲೂ, ಮತ್ತೆ ಕೆಲವು ಆನೆ, ಆಮೆ, ದಂಟನ್ನು ಕಚ್ಚಿರುವ ಹಂಸ ಮುಂತಾದ ಪ್ರಾಣಿಗಳ ಚಿತ್ರಣದಿಂದಲೂ ಶೋಭಿಸುತ್ತಿವೆ. ಆಲದ ಎಲೆಯ ಮೇಲೆ ಮಲಗಿರುವ ಕೃಷ್ಣ, ಶಿವಪುರಾಣದ ಭಾಗಗಳು ಮೊದಲಾದುವೆಲ್ಲ ಪ್ರಶಂಸನೀಯವಾಗಿದೆ.

ನವರಂಗದ ಭಾಗದಲ್ಲಿ ವಿನಾಯಕ, ಸುಂದರ ಕೆತ್ತನೆಯ ಕುಮಾರಸ್ವಾಮಿ ಮೊದಲಾದ ವಿಗ್ರಹಗಳು ತುಂಬಿವೆ. ಇಡೀ ನವರಂಗವನ್ನು ಹೊತ್ತಿರುವಂತಿರುವ ನಾಲ್ಕು ಕಂಬಗಳ ಮೇಲೆ ಮಾರ್ಕಂಡೇಯ, ವೀರಭದ್ರ, ವಿನಾಯಕರ ವಿಗ್ರಹಗಳನ್ನು ಬಿಡಿಸಲಾಗಿದೆ. ಮಾಳಿಗೆಯ ಮಧ್ಯದಲ್ಲಿರುವ ಶಿಲಾಫಲಕ ಅಷ್ಟದಿಕ್ಪಾಲಕರದು. ಮಧ್ಯದಲ್ಲಿ ಗೌರೀಸಮೇತನಾದ ಶಂಕರ ವಿರಾಜಿಸುತ್ತಿದ್ದಾನೆ. ಆದರೆ ಇವೆಲ್ಲವೂ ಹೊಗೆ, ಧೂಳುಗಳಿಂದ ತುಂಬಿ ಕಳಾಹೀನವಾಗಿದೆ. ರಾಸಾಯನಿಕ ಕ್ರಿಯೆ ಅಗತ್ಯವಾಗಿದೆ. ಇಲ್ಲಿನ ಬಾಗಿಲಿಗೆ ಹಾಕಿರುವ ಚೌಕಟ್ಟು ಚಿತ್ರವಿಚಿತ್ರ ಬಳ್ಳಿಗಳನ್ನು ಹೆಣಿಗೆಯಿಂದ ಆಕರ್ಷವಾಗಿದೆ. ಗರ್ಭಗುಡಿಯಲ್ಲಿರುವ ಸೋಮೇಶ್ವರನ ಲಿಂಗವು ಕಪ್ಪುಶಿಲೆಯದಾಗಿದೆ. ಅಷ್ಟೇನೂ ಎತ್ತರವಿಲ್ಲದ ಪಾಣಿಪಟ್ಟದ ಮೇಲೆ ವಿರಾಜಿಸುತ್ತಿರುವ ಶಂಕರನು ಸನ್ಮಂಗಳಗಳನ್ನುಂಟುಮಾಡುತ್ತಿದ್ದಾನೆ.

ದೇವಾಲಯದ ಬಲಭಾಗದಲ್ಲಿ ನೆಲದಿಂದ ಮೇಲೆದ್ದಿರುವ ಅಸ್ತಿವಾರದ ಮೇಲಿದೆ ಇಡೀ ದೇವಾಲಯ ಕೇಂದ್ರ ಆಕರ್ಷಣೆಯಾಗಿರುವ ಕಲ್ಯಾಣ ಮಂಟಪ. ಇದೊಂದು ಅಮೋಘವಾಸ್ತುಶಿಲ್ಪ ಸೌಂದರ್ಯದ ಮಾದರಿ. ಮಾಳಿಗೆಗೆ ಹಾಕಿರುವ ಕಲ್ಲುಚಪ್ಪಡಿಗಳನ್ನು ಆಶ್ಚರ್ಯಕರವಾದ ರೀತಿಯಲ್ಲಿ ಕೂರಿಸಲಾಗಿದೆ. ನಾಲ್ಕಾರು ಶತಮಾನಗಳ ಹಿಂದೆ ಇದ್ದ ತಾಂತ್ರಿಕ ಕುಶಲತೆಗೊಂದು ಅಪರೂಪ ನಿದರ್ಶನವಾಗಿದೆ. ಸಾಲಂಕೃತ ಮಂಟಪವನ್ನು ತೃಪ್ತಿಯಾಗುವವರೆಗೆ ನೋಡಬಹುದು. ರೂವಾರಿಗಳ ಅಪ್ರತಿಮ ಜಾಣ್ಮೆಯ ಪ್ರದರ್ಶನವಾಗಿರುವಂತೆ ಪರಿಣತಿಯ ಪ್ರತೀಕವಾಗಿ ಪೂರ್ಣವಿಕಾಸವಾಗಿ ನಿಂತಿರುವುದು ಇದರ ಹೆಮ್ಮೆ. ಇಲ್ಲಿನ ಕಂಬಗಳು ನವಿಲು, ಗಿಳಿಗಳ ವಿವಿಧ ಭಂಗಿಗಳಿಂದ ಬಹು ಮನೋಜ್ಞವಾಗಿದೆ. ಬೋದಿಗೆಗಳಲ್ಲಿ ವಿನೂತನ ಮಾಟವಿದೆ. ಒಂದು ಕ್ಷಣ ಪ್ರವಾಸಿಗಳನ್ನು ಮಂತ್ರಮುಗ್ಧರನ್ನಾಗಿ ಮಾಡುವ ಮಧ್ಯದಲ್ಲಿ ಇಳಿಬಿಟ್ಟಂತಿರುವ ಕಮಲದ ಚಿತ್ರಣ ಸುಂದರವಾಗಿದೆ. ಕಂಬಗಳ ಮೇಲೆ ಮೂಲೆಗಳಲ್ಲಿ ಬಿಡಿಸಿ ಜೋಡಿಸಿರುವ ಪ್ರತಿಮೆಗಳಲ್ಲಿ ಒಂದು ಕಾಣೆಯಾಗಿರುವುದು ದೌರ್ಭಾಗ್ಯ ಹಾಗೂ ದುರಂತವಾಗಿದೆ.



ಇಲ್ಲಿರುವ ಉತ್ಸವ ಮಂಟಪದ ಮೇಲೆ ಅರೆಮುರಿದ ಗೋಪುರವಿದೆ. ಮಹಾದ್ವಾರದ ಮೇಲೆ ಅಂದಗೆಡುತ್ತಿರುವ; ಮಳೆ, ಗಾಳಿಗಳ ಹೊಡೆತಕ್ಕೆ ಬಲಿಯಾಗಿರುವ ಗೋಪುರ ಕುಸಿಯುತ್ತಿದೆ. ವಿಜಯನಗರ ಶೈಲಿಯ ನಿರ್ಮಾಣಕ್ಕೊಂದು ಆ ಕೊಡುಗೆಯಾಗಿರುವ ಈ ಮಹಾನ್ ಗೋಪುರದ ಪುನರ್ ನಿರ್ಮಾಣ ಅತ್ಯಗತ್ಯ ಅಪೇಕ್ಷಣೀಯ. ಕೇಂದ್ರ ಸರ್ಕಾರದ ಪ್ರಾಚ್ಯವಸ್ತು ಇಲಾಖೆ ಇದನ್ನು ಗಮನಿಸುವಂತಾದರೆ ಅದೊಂದು ಸುದೈವ. ಪಕ್ಕದಲ್ಲಿಯೇ ಇರುವ ವಿಶಾಲವಾದ ಪುಷ್ಕರಿಣಿ ಪಾಚಿ, ಕೊಳೆಗಳ ಆಗರ. ಜಲಶುದ್ಧೀಕರಣ, ಸಂರಕ್ಷಣೆ ಅನಿವಾರ್ಯ. ದೇವಾಲಯದ ವಾಸ್ತುಶಿಲ್ಪ ಕಲಾಭಿರುಚಿ ಇರುವವರಿಗೆ ಸೋಮೇಶ್ವರ ದೇವಾಲಯವೊಂದು ಸಂದರ್ಶನೀಯ ಸ್ಥಳವಾಗಿರುವಂತೆ ಭಿನ್ನರುಚಿಯ ಔತಣವನ್ನು ನೀಡುವ ಕಲಾಸಮಾರಾಧನೆ.

(ಕೃಪೆ - ಕೋಲಾರದ ಸುತ್ತಣ ದೇವಾಲಯಗಳು)



# ಶರಣರು

# ವಚನ ಸಾಹಿತ್ಯ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ಹಿಂದೂದೇಶದಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ಅನಾದಿ ಕಾಲದಿಂದಲೂ ಗುರುತಿಸುತ್ತಾ ಬರಲಾಗಿದೆ. ಆಧ್ಯಾತ್ಮಿಕ ಶಕ್ತಿಗೆ ವಿಶಿಷ್ಟತೆ ಬಂದದ್ದು ೧೨ನೇ ಶತಮಾನದಲ್ಲಿ, ಅದೂ ನಮ್ಮ ಕನ್ನಡನಾಡಿನಲ್ಲಿ. ಧಾರ್ಮಿಕ ಕ್ರಾಂತಿಯಲ್ಲಿ ಮುಂಚೂಣಿಯಲ್ಲಿದ್ದವರು, ಬಸವಣ್ಣ, ಚೆನ್ನಬಸವಣ್ಣ, ಅಲ್ಲಮ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ, ಮಾಚಿದೇವ ಹಾಗೂ ಅಕ್ಕನಾಗಮ್ಮಮೊದಲಾದವರು. ಈ ಆಧ್ಯಾತ್ಮಿಕ ಕ್ರಾಂತಿ ಬರೀ - ಧಾರ್ಮಿಕತೆಗೆ ಮಾತ್ರವಲ್ಲ ಒಟ್ಟಾರೆ ಸಮಾಜದಲ್ಲಿ ಏರು - ಪೇರುಗಳನ್ನು ಸರಿಪಡಿಸಲು ಜನತೆಯ ಸಮಗ್ರ ಬದುಕಿನ ಚಿಂತನೆಯಾಗಿತ್ತು.

ಕಲ್ಯಾಣ ರಾಜ್ಯ ನಿರ್ಮಾಣವೇ ಆ ಧಾರ್ಮಿಕ ಕ್ರಾಂತಿಯ ಉದ್ದೇಶವೂ ಆಗಿತ್ತು. ಸಾಧನೆಗಾಗಿ ಬಳಸಿದ್ದು, ಬಸವಣ್ಣನವರು ಸಂಶೋಧಿಸಿ ಕೊಟ್ಟ ಇಷ್ಟಲಿಂಗ. ಇದೇ ಶಿವಯೋಗದ ತಳಹದಿ. ಇಷ್ಟಲಿಂಗದ ಆಗಾಧತೆಯನ್ನು ಇವತ್ತಿಗೂ ನಾವೂ ಮನಗಾಣಬಹುದು. ಇದರಿಂದಾಗಿ ಬಸವಣ್ಣನವರ ಆಂತರಿಕಶಕ್ತಿಯ ಆಳವನ್ನು ನಿಲುವನ್ನು ನಾವು ಗುರುತಿಸಬಹುದು.

ಶರಣರು, ಈ ಬ್ರಹ್ಮಾಂಡ, ಮಿಥ್ಯವೆನ್ನದೆ, ಸತ್ಯವಾಗಿಸಿ ಅದನ್ನೇ ಸಾಧನೆಯ ಒಂದು ಅಂಗವಾಗಿಸಿಕೊಂಡರು. ಯೋಗದಲ್ಲಿಯೇ ಶಿವಯೋಗಪರಿಪೂರ್ಣ ಎಂಬುದನ್ನು, ಅವರು ಸಾಧಿಸಿ ತೋರಿಸಿದ ಅನುಭವಗಳಿಂದ ಕಾಣಬಹುದು. ಅಂದರೆ, ಮಾನವನನ್ನು ಮಾನವನನ್ನಾಗಿಸಿದ್ದಲ್ಲದೆ ದೇವನನ್ನಾಗಿಯು ಪರಿವರ್ತಿಸಿದರು. ಇದೆಲ್ಲದಕ್ಕೂ ಶಿವಯೋಗವೇ ಮೂಲ. ಈ ಹಂತದಲ್ಲಿ, ಅವಗುಣಗಳನ್ನು ಕಳೆದು, ಸದ್ಗುಣಗಳನ್ನು ಬೆಳೆಸಿಕೊಂಡು, ಅಳವಡಿಸಿಕೊಂಡು, ಹಂತಹಂತವಾಗಿ ಮೇಲ್ಮಟ್ಟಕೇರಿ ತಾವಷ್ಟೇ ಅಲ್ಲ ಇತರೇ ಜನಸಮೂಹವನ್ನು ತಮ್ಮ ಎತ್ತರಕ್ಕೆ ಬೆಳೆಸಿದರು. ಇದೇ ಲಿಂಗವಂತ ಧರ್ಮದ ಮಹತ್ವ.

ಸಮಕಾಲೀನರಾದ ಸಿದ್ಧರಾಮೇಶ್ವರರು (ಕಲ್ಯಾಣಕ್ಕೆ ಬರುವ ಮೊದಲು) ಆಗಲೇ ಹಠಯೋಗ ಸಾಧನೆಯಲ್ಲಿ ಪರಿಣಿತರಾಗಿ ಒಂದು ಸ್ವಸ್ಥನಿಲುವಿನಲ್ಲಿ (ಪರಿಪೂರ್ಣವಲ್ಲದ) ನಿಂತು ಧರ್ಮ ಕಾಯಕ ಕೈಕೊಂಡಿದ್ದರು. ಆದರೆ, ಅಲ್ಲಮ ಪ್ರಭುಗಳು ಅವರನ್ನು ಕಂಡು, ತಾವು ಮಾಡುವ ಕಾರ್ಯಕ್ಕಿಂತಲು ಮಿಗಿಲಾದ ಸಾಧನೆ ಬೇರೆ ಇದೆ ಎಂದು ತಿಳಿಸಿ ಕಲ್ಯಾಣಕ್ಕೆ ಕರೆತರುತ್ತಾರೆ. ಅಲ್ಲಿ ಅವರು ಚೆನ್ನ ಬಸವಣ್ಣನವರಿಂದ ಲಿಂಗದೀಕ್ಷೆ ಹೊಂದುತ್ತಾರೆ. ಚೆನ್ನ ಬಸವಣ್ಣನವರು ಸಿದ್ಧರಾಮೇಶ್ವರರಿಗಿಂತಲೂ ವಯಸ್ಸಿನಲ್ಲಿ ಅತೀ ಚಿಕ್ಕವರಾಗಿದ್ದರೂ, ಅವರ ಸಾಧನೆಯ, ಅಲೌಕಿಕ ವ್ಯಕ್ತಿತ್ವ ಅರಿತು ಅವರನ್ನು ಗುರುವನ್ನಾಗಿ ಒಪ್ಪಿಕೊಂಡರು. ಹೀಗೆ ಶಿವಯೋಗ ಸಾಧನೆಯ ಅನುಭಾವಿಗಳಿಂದಲೂ ಪ್ರಭಾವಿತರಾಗಿ ಪರಿವರ್ತಿತರಾದರು.

ಅದೇರೀತಿ ಚೆನ್ನಬಸವಣ್ಣ ವಯಸ್ಸಿನಲ್ಲಿ ಕಿರಿಯರಾದರೂ ಅವರ ಕಾರ್ಯ ಅಗಾಧವಾಗಿದ್ದು ಅವರಲ್ಲಿದ್ದುದು, ಭೌತಿಕ ಶಕ್ತಿಯಾಗಿರದೆ, ಆಂತರಿಕಶಕ್ತಿ ಎಂಬುದನ್ನು ನಾವು ಮನಗಾಣಬಹುದು. ಅವರು ಶಿವಯೋಗದಲ್ಲಿ ಎಷ್ಟೊಂದು ಮುಂದುವರೆದವರಾಗಿದ್ದರೆಂದರೆ (ಮೇಲ್ಮೆಯನ್ನು ಸಾಧಿಸಿದ್ದು) ಅವರನ್ನು ಷಟಸ್ಥ ಚಕ್ರವರ್ತಿ ಎಂದು ಗುರುತಿಸಲಾಗಿತ್ತು. ಅವರ, ಈ ಕೆಳಗಿನ ವಚನವನ್ನು ಮನನ ಮಾಡಿದರೆ, ನಮಗೆ ಅವರ ಅಲೌಕಿಕ ನಿಲುವು ಸ್ಪಷ್ಟವಾಗುತ್ತದೆ. ಅವರು ಕೈಕೊಂಡ ಆಂತರಿಕ ಪೂಜೆಯ ಕಲ್ಪನೆ ಮೂಡುತ್ತದೆ.

ಕಂದದ ಹೂವನೆ ಕೊಯ್ದು,
ನಂದದಾರತಿಯನ್ನೇ ಬೆಳಗಿ,
ಅಂದವಳಿಯದ ಮುನ್ನ
ಬಿಂದು ತುಳುಕದ ಮುನ್ನ
ನಂದಿಮುಂದುಗೆಡದಮುನ್ನ
ಅಂದಂದಿನ ಹೊಸಪೂಜೆ !
ಆ ಲಿಂಗಮಧ್ಯವನೆ ಅರಿತು ನೋಡಿ,
ಮೇರುಗಿರಿ ಆಕಳನೆ ಕರೆದು
ಕ್ಷೀರದಲ್ಲಿ ಅಡಿಗೆಯ ಮಾಡಿ
ಕೂಡಲ ಚೆನ್ನ ಸಂಗಯ್ಯನೆಂಬ ಲಿಂಗಕ್ಕೆ
ಆರೋಗಣೆಯ ಸಮಯ !
ಚೆನ್ನಬಸವಣ್ಣ

ಷಟ್‌ಸ್ಥಲ ಹಂತಗಳಲ್ಲಿ ಶರಣರು ಅವರ ಶಿವಯೋಗ ಸಾಧನೆಯ ಮೂಲಕ ದೈವೀ ಪುರುಷರಾಗಿದ್ದದ್ದು (ಶರಣತ್ವ ಸಂಪಾದಿಸಿದ್ದು ನಂತರ ಐಕ್ಯ ಹಂತ - ಪ್ರಕೃತಿ ಬಂಧನ ಕಳಚಿ ಸ್ವತಂತ್ರರಾಗಿದ್ದು) ಅವರ ಅನುಭಾವಿಕವಚನ ಸಾಹಿತ್ಯದ ಮೂಲಕ ಇವತ್ತಿಗೂ ನಾವು ಕಂಡುಕೊಳ್ಳಬಹುದು. ಈ ಹಂತದಲ್ಲಿ ಅವರು, ಯಾವುದೇ ವಿಶಿಷ್ಟಸ್ಥಿತಿಗತಿಗೆ ಬದ್ಧರಾಗುಳಿಯದೇ, ಸ್ವತಂತ್ರರಾಗಿ, ಭಯವಿಲ್ಲದೆ, ಸತ್ಯಸಂಧರಾಗಿ ಸಾಮಾಜಿಕ ಕಳಕಳಿಹೊತ್ತು ಲೋಕ ಕಲ್ಯಾಣಕ್ಕಾಗಿ ಶ್ರಮಿಸಿದವರಾಗಿದ್ದರು. ಅವರು ಇತ್ತ ಅನುಭಾವಿಕ ವಚನ ಸಾಹಿತ್ಯ ಜಗತ್ತಿನ ಧಾರ್ಮಿಕ ಆಧ್ಯಾತ್ಮಿಕ ಪವಿತ್ರ ಸಾಹಿತ್ಯದಲ್ಲಿ ತನ್ನದೇ ಆದ ವಿಶಿಷ್ಟ ಮೆರುಗಿನಿಂದ, ಇಂದು ಮುಂದು ಎಂದೆಂದಿಗೂ ಮಾನವನಿಗೆ ದಾರ್ಶನಿಕವಾಗಿರಲು ಹಾದಿ ತೋರಬಲ್ಲದು.





# ಜ್ಯೋತಿರ್ಲಿಂಗಗಳು

---ಶ್ರೀಮತಿ ಸುಮಿತ್ರಾ ಶಾನಭಾಗ.

ಮಾಘ ಬಹುಳ ಚತುರ್ದಶಿಯಂದು ಮಹಾ ಶಿವರಾತ್ರಿ, ಶಿವರಾತ್ರಿಯು ಶಿವ ಮತ್ತು ಪಾರ್ವತಿಯರ ವಿವಾಹ ಕಲ್ಯಾಣದ ದಿನವೆಂಬ ನಂಬಿಕೆ ಇದೆ. ಆದುದರಿಂದಲೇ ಈ ದಿನವನ್ನು ವ್ರತದ ದಿನವೆಂದೂ, ಹಬ್ಬದ ದಿನವೆಂದೂ ಆಚರಿಸುತ್ತೇವೆ. ಶಿವನ ಪ್ರೀತ್ಯರ್ಥವಾಗಿ, ಅನುಗ್ರಹ ಸಂಪಾದನೆಗಾಗಿ ಆ ರಾತ್ರಿಯುದ್ದಕ್ಕೂ ಶಿವನಾಮಸ್ಮರಣೆಯಲ್ಲಿ ಜಾಗರಣೆ ಮಾಡುವ ಸಂಪ್ರದಾಯ ನಡೆದು ಬಂದಿದೆ. ಅಂದು ಉಪವಾಸ, ಜಾಗರಣೆಗಳು ಬಿಲ್ವಾರ್ಚನೆಗಳೊಂದಿಗೆ ಸಂಗೀತ, ಭಜನೆ, ಪುರಾಣ ಶ್ರವಣಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಶಿವಪುರಾಣದ ಕೋಟಿ ರುದ್ರ ಸಂಹಿತೆಯಲ್ಲಿ ಹೇಳಲಾಗಿರುವ ದ್ವಾದಶ ಜ್ಯೋತಿರ್ಲಿಂಗಗಳ ಉಗಮ ಹಾಗೂ ಮಹಾತ್ಮೆ ಮನನ ಮಾಡುವಂಥಹದು.

## ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರ

ಸೌರಾಷ್ಟ್ರೇ ಸೋಮನಾಥಂ ಚ
ಶ್ರೀ ಶೈಲೇ ಮಲ್ಲಿಕಾರ್ಜುನಂ
ಉಜ್ಜಯಿನ್ಯಾಂ ಮಹಾಕಾಲಂ
ಓಂಕಾರೇ ಪರಮೇಶ್ವರಂ
ಕೇದಾರಂ ಹಿಮವತ್ಪೃಷ್ಠೇ
ಡಾಕಿನ್ಯಾಂ ಭೀಮಶಂಕರಂ
ವಾರಣಾಸ್ಯಂ ಚ ವಿಶ್ವೇಶಂ
ತ್ರ್ಯಂಬಕಂ ಗೌತಮೀ ತಟೇ
ವೈದ್ಯನಾಥಂ ಚಿತಾಭೂಮೌ
ನಾಗೇಶಂ ದಾರುಕಾವನೇ
ಸೇತುಬಂಧೇ ಚ ರಾಮೇಶಂ
ಘುಶ್ಮೇಶಂ ಚ ಶಿವಾಲಯೇ
ದ್ವಾದಶೈತಾನಿ ನಾಮಾನಿ
ಪ್ರಾತರುತ್ಥಾಯ ಯಂ ಪಠೇತ್
ಸರ್ವ ಪಾಪಂ ವಿನಿರ್ಮುಕ್ತಂ
ಸರ್ವ ಸಿದ್ಧಿ ಫಲಂ ಲಭೇತ್

ಸೌರಾಷ್ಟ್ರದ ಸೋಮನಾಥ, ಶ್ರೀಶೈಲದ ಮಲ್ಲಿಕಾರ್ಜುನ, ಉಜ್ಜಯನಿಯ ಮಹಾಕಾಲ, ಓಂಕಾರ ಕ್ಷೇತ್ರದ ಪರಮೇಶ್ವರ, ಹಿಮಾಲಯದ ಕೇದಾರ, ಡಾಕಿನಿಯ ಭೀಮಶಂಕರ, ಕಾಶಿಯ ವಿಶ್ವೇಶ್ವರ, ಗೌತಮೀ ತೀರದ ತ್ರ್ಯಂಬಕ, ಚಿತಾಭೂಮಿಯ ವೈದ್ಯನಾಥ, ದಾರುಕ ವನದ ನಾಗೇಶ, ಸೇತುವಿನ ರಾಮೇಶ, ಶಿವಾಲಯದ ಘುಶ್ಮೇಶ ಈ ಹನ್ನೆರಡು ಜ್ಯೋತಿರ್ಲಿಂಗಗಳ ದರ್ಶನ ಮಾಡಿದವರಿಗೆ ಇಹಲೋಕದಲ್ಲಿ ಮಾತ್ರವಲ್ಲದೇ ಪರಲೋಕದಲ್ಲೂ ಇಷ್ಟಾರ್ಥಗಳನ್ನು ಪೂರೈಸುತ್ತಾನೆ. ಬೆಳಿಗ್ಗೆದ್ದು ಈ ಹನ್ನೆರಡು ಹೆಸರುಗಳನ್ನು ಪಠಿಸಿದರೆ ಎಲ್ಲ ಪಾಪಗಳಿಂದ ಮುಕ್ತರಾಗಿ ಸಿದ್ಧಿ ಪಡೆಯುವರೆಂದು ಹೇಳಿಕೆ.

ಸೋಮನಾಥೇಶ್ವರ :-- ಗುಜರಾತದ ಪಶ್ಚಿಮ ರೇಲ್ವೆಯ ರಾಜಕೋಟ ವೆರಾವಲ್ ಅಥವಾ ಖಿಜಡಿಯಾ ವೆರಾವಲ್‌ಗೆ ಹೋಗಿ ವೆರಾವಲ್ ರೇಲ್ವೆ ಸ್ಟೇಶನ್ನಿನಲ್ಲಿ ಇಳಿದು ಅಲ್ಲಿಂದ ಐದು ಕಿ.ಮೀ. ಹೋದರೆ ಪ್ರಭಾಸ ಪಟ್ಟಣವು ದೊರೆಯುವುದು. ಈ ಪ್ರಭಾಸ ಅಥವಾ ಸೋಮನಾಥ ಕ್ಷೇತ್ರದಲ್ಲಿಯೇ ಜ್ಯೋತಿರ್ಲಿಂಗವಿದೆ. ಚಂದ್ರನಿಗೆ ಮದುವೆ ಮಾಡಿಕೊಟ್ಟ ಇಪ್ಪತ್ತೇಳು ಮಂದಿ ಪತ್ನಿಯರಲ್ಲಿ ರೋಹಿಣಿ ಮಾತ್ರ ಅಚ್ಚುಮೆಚ್ಚಿನವಳಾಗಿ ಉಳಿದವರನ್ನು ಕಡೆಗಣಿಸಿದಾಗ ಕೋಪಗೊಂಡ ಮಾವ ದಕ್ಷನು ಅಳಿಯ ಚಂದ್ರನಿಗೆ ಕ್ಷಯರೋಗಿಯಾಗೆಂದು ಶಪಿಸಿದ. ಚಂದ್ರ ತನ್ನ ಶಾಪ ವಿಮೋಚನೆಗಾಗಿ ಪ್ರಭಾಸ ಕ್ಷೇತ್ರದಲ್ಲಿ ಮೃತ್ಯುಂಜಯ ಮಂತ್ರ ಜಪದಿಂದ ಆರು ತಿಂಗಳ ಕಾಲ ಶಿವನನ್ನು ಆರಾಧಿಸಿದ. ಹತ್ತು ಕೋಟಿ ಜಪ ಮುಗಿದೊಡನೆ ಶಿವ ಪ್ರತ್ಯಕ್ಷನಾಗಿ ಚಂದ್ರನನ್ನು ಅನುಗ್ರಹಿಸಿದನಲ್ಲದೆ ಚಂದ್ರನ ಕೋರಿಕೆಯಂತೆ ಉಮಾಸಹಿತನಾಗಿ ಆ ಕ್ಷೇತ್ರದಲ್ಲಿ ಸೋಮೇಶ್ವರನೆಂಬ ಹೆಸರಿನಿಂದ ನೆಲೆಸಿದ. ಈ ಲಿಂಗದ ಪೂಜೆಯಿಂದ ಕ್ಷಯ, ಕುಷ್ಠಗಳಂತಹ ಮಹಾರೋಗಗಳು ಪರಿಹಾರವಾಗುವೆಂಬ ನಂಬಿಕೆ ಇದೆ.

ಮಲ್ಲಿಕಾರ್ಜುನ :-- ವಿಜಯವಾಡಾ - ಗುಂಟಕಲ್ ರೈಲು ಮಾರ್ಗದಲ್ಲಿರುವ ಮಾರ್ಕಾಪುರದಿಂದ ೫೯ ಮೈಲು ದೂರವಿರುವ ಶ್ರೀಶೈಲ ಕ್ಷೇತ್ರದ ಜ್ಯೋತಿರ್ಲಿಂಗವೇ ಮಲ್ಲಿಕಾರ್ಜುನ. ಭೂಪ್ರದಕ್ಷಿಣೆ ಮಾಡಿ ಹಿಂತಿರುಗಿದ ಕುಮಾರಸ್ವಾಮಿಯ ಎದುರಿನಲ್ಲಿ ನಾರದರು ಗಣಪತಿಯನ್ನು ಮಾತ್ರ ಹೊಗಳಿ ಆತನ ವಿವಾಹ ಕುರಿತು ಮಾತನಾಡಿದಾಗ ಕುಮಾರನು ತಂದೆ - ತಾಯಿಗಳನ್ನು ತೊರೆದು ಕ್ರೌಂಚ ಪರ್ವತಕ್ಕೆ ಹೊರಟು ಹೋದ. ಎಷ್ಟು ಪ್ರಯತ್ನಿಸಿದರೂ ಅವನು ಮನೆಗೆ ಬರದೇ ಅಹಂಕಾರದಿಂದ ಬೀಗಿ ಅಲ್ಲಿಯೇ ಕುಳಿತ, ಕೊನೆಗೆ ಪುತ್ರ ವಾತ್ಸಲ್ಯದಿಂದ ಶಿವ - ಪಾರ್ವತಿಯರೇ ಕ್ರೌಂಚ ಪರ್ವತಕ್ಕೆ ಬಂದರು. ಕುಮಾರನು ಸಿಟ್ಟಿನಿಂದ ಇನ್ನೂ ಮೂರು ಗಾವುದ ದೂರ ಹೋದ. ಕ್ರೌಂಚವನಕ್ಕೆ ಬಂದ ಶಿವ - ಪಾರ್ವತಿಯರು ಜ್ಯೋತಿರ್ಲಿಂಗ ರೂಪದಿಂದ ಅಲ್ಲಿ ನೆಲೆಸಿ ಪ್ರತಿ ಪರ್ವಕಾಲದಲ್ಲಿಯೂ ತಮ್ಮ ಮಗನನ್ನು ನೋಡಲು ಹೋಗಿ ಬರತೊಡಗಿದರು. ಈ ಲಿಂಗವೇ ಸಮಸ್ತ ಪಾಪಗಳನ್ನು ಪರಿಹರಿಸುವ ಮಲ್ಲಿಕಾರ್ಜುನ.

ಮಹಾಕಾಲ:-- ಉಜ್ಜಯನಿಯಲ್ಲಿರುವ ಜ್ಯೋತಿರ್ಲಿಂಗವೇ ಮಹಾಕಾಲ. ಅವಂತೀ ನಗರದಲ್ಲಿ ವೇದಪ್ರಿಯನೆಂಬ ಬ್ರಾಹ್ಮಣನ ಮಕ್ಕಳಾದ ದೇವಪ್ರಿಯ, ಪ್ರಿಯಮೇಧ, ಸುಕೃತ ಮತ್ತು ಧರ್ಮವಾಹಿ ಎಂಬುವರು ಶಿವಪೂಜೆಯಲ್ಲಿ ತಲ್ಲೀನರಾದಾಗ ದೂಷಣ ಎಂಬ ರಾಕ್ಷಸನು ಅವರನ್ನು ಕೊಲ್ಲಲು ಬಂದ. ಅಷ್ಟರಲ್ಲಿ ಅವರು ಪ್ರಾರ್ಥಿಸುತ್ತಿದ್ದ ಸ್ಥಳದಲ್ಲಿ ಒಂದು ಹಳ್ಳವಾಗಿ ಅದರೊಳಗಿಂದ ಭಯಂಕರ ಆಕಾರದ ಶಿವನ ಮಹಾಕಾಲ ರೂಪ ಪ್ರಾದುರ್ಭವಿಸಿ ಭೂಷಣ ಹಾಗೂ ಅವನ ಸಹಚರರನ್ನು ನಾಶಮಾಡಿದ. ಬ್ರಾಹ್ಮಣ ಪುತ್ರರ ಕೋರಿಕೆಯಂತೆ ಆ ಹಳ್ಳದಲ್ಲಿ ಮಹಾಕಾಲನ ರೂಪದಿಂದ ನೆಲೆಸಿದ, ಈ ಲಿಂಗದ ದರ್ಶನ ಮಾಡಿದರೆ ಕನಸಿನಲ್ಲಿ ಸಹ ಭಯವಾಗುವುದಿಲ್ಲ ಎಂಬ ನಂಬಿಕೆ.

ಪರಮೇಶ್ವರ :-- ಮನ್‌ಮಾಡಿನಿಂದ ಖಾಂಡ್ವ - ಅಜ್ಮೀರ ಮಾರ್ಗದಲ್ಲಿರುವ ಓಂಕಾರ ಕ್ಷೇತ್ರದ ಜ್ಯೋತಿರ್ಲಿಂಗವೇ ಓಂಕಾರೇಶ್ವರ, ಪರ್ವತರಾಜನಾದ ವಿಂಧ್ಯನಿಗೆ ತನ್ನ ಸಮಾನರೇ ಯಾರೂ ಇಲ್ಲ ಎಂಬ ಅಹಂಕಾರ ಬಂದಿತಂತೆ, ನಾರದರು ಅವನ ಗರ್ವ 'ಮುರಿಯಬೇಕೆಂದು ಮೇರುವನ್ನು ನೀನು ಸರಿದೂಗಲಾರೆ' ಎಂದು ತಿಳಿಸಿದಾಗ ವಿಂಧ್ಯನು ಓಂಕಾರ ಕ್ಷೇತ್ರಕ್ಕೆ ಹೋಗಿ ಪಾರ್ಥಿವ ಲಿಂಗವನ್ನಿಟ್ಟು ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ ತಾನು ಅಪೇಕ್ಷಿಸುವ ಯಾವ ಕಾರ್ಯವನ್ನಾದರೂ ಸಾಧಿಸಿಕೊ

ಳ್ಳುವ ವರ ಪಡೆದ. ಅದೇ ಸಮಯದಲ್ಲಿ ಮುನಿಗಳೂ, ದಂಪತಿಗಳೂ ಶಿವನನ್ನು ಅಲ್ಲೇ ನೆಲೆಸದೇಕೆಂದು ಪ್ರಾರ್ಥಿಸಿದಾಗ ಶಿವನು ಸುಪ್ರೀತನಾಗಿ ಜ್ಯೋತಿರ್ಲಿಂಗದ ರೂಪದಲ್ಲಿ ನೆಲೆಸುತ್ತಾನೆ. ಈ ಲಿಂಗಕ್ಕೆ ಅಮರೇಶ್ವರನೆಂದೂ ಹೆಸರಿದೆ.

ಕೇದಾರೇಶ್ವರ :-- ವಿಷ್ಣುವಿನ ಅವತಾರರಾದ ನರ - ನಾರಾಯಣರೆಂಬ ಮಹರ್ಷಿಗಳು ಬದರಿಕಾಶ್ರಮದಲ್ಲಿ ಪಾರ್ಥಿವ ಲಿಂಗವನ್ನಿಟ್ಟುಕೊಂಡು ಪೂಜಿಸುತ್ತಿದ್ದರು. ಶಿವನು ಅವರ ಪೂಜೆಗೆ ಒಲಿದು ಅವರ ಕೋರಿಕೆಯಂತೆ ಲೋಕಹಿತದ ದೃಷ್ಟಿಯಿಂದ ಜ್ಯೋತಿರ್ಲಿಂಗ ರೂಪದಲ್ಲಿ ಕೇದಾರಕ್ಷೇತ್ರದಲ್ಲಿ ನೆಲೆಸಿದ. ಪಾಂಡವರು ಈ ಕ್ಷೇತ್ರಕ್ಕೆ ಬಂದಾಗ ಕೇದಾರೇಶ್ವರನನ್ನು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದರು. ಈ ಲಿಂಗವು ಬಹಳ ದೊಡ್ಡದಾಗಿದ್ದು ಈ ಲಿಂಗದ ಒಂದು ಭಾಗಕ್ಕೆ ಜಲ - ಪುಷ್ಪಾದಿಗಳ ಅರ್ಚನೆಯಾದರೆ ಇನ್ನೊಂದು ಭಾಗಕ್ಕೆ ಘೃತ ಲೇಪನ ಮಾಡುವರು. ಕೇದಾರ ಕ್ಷೇತ್ರದಲ್ಲಿರುವ ಶಿವನ ಈ ರೂಪಕ್ಕೆ ಬಳೆಗಳನ್ನು ಸಮರ್ಪಿಸಿದರೆ ಎಲ್ಲ ಪಾಪಗಳೂ ಪರಿಹಾರವಾಗುವುದೆಂಬ ನಂಬಿಕೆ.

ಭೀಮಶಂಕರ :-- ವಿರಾಧನ ಪತ್ನಿ ಕರ್ಕಟಿ ಮತ್ತು ಕುಂಭಕರ್ಣರಿಗೆ ಜನಿಸಿದ ಭೀಮನೆಂಬ ರಾಕ್ಷಸನು ತನ್ನ ತಾಯಿಯಿಂದ ಕುಂಭಕರ್ಣ ಹಾಗೂ ವಿರಾಧರ ಮರಣಕ್ಕೆ ರಾಮನೇ ಕಾರಣನೆಂದು ತಿಳಿದು ದೇವತೆಗಳ ಮೇಲೆ ಸೇಡು ತೀರಿಸಲು ಘೋರ ತಪಸ್ಸನ್ನಾಚರಿಸಿದ. ಬ್ರಹ್ಮನು ಪ್ರತ್ಯಕ್ಷನಾಗಿ ಅವನಿಗೆ ಯಾರಿಗೂ ಇಲ್ಲದ ಅಸಾಮಾನ್ಯ ಬಲವನ್ನು ಅನುಗ್ರಹಿಸಿದ. ವರಬಲದಿಂದ ಕೊಬ್ಬಿದ ಭೀಮನು ಹರಿ, ಇಂದ್ರ ಮೊದಲಾದ ದೇವತೆಗಳನ್ನು ಗೆದ್ದು ನಂತರ ಭೂಲೋಕಕ್ಕೆ ದಂಡೆತ್ತಿಬಂದು ರಾಜನಾದ ಸುದಕ್ಷಿಣನನ್ನೂ ಸೋಲಿಸಿ ರಾಜ ದಂಪತಿಗಳನ್ನು ಸೆರೆಯಲ್ಲಿ ಇಡಿಸಿದಾಗ ಸೆರೆಮನೆಯಲ್ಲಿಯೇ ಸುದಕ್ಷಿಣನು ಲಿಂಗವನ್ನು ಪೂಜಿಸತೊಡಗಿದ. ಸುದಕ್ಷಿಣನನ್ನು ಕೊಲ್ಲಲು ಭೀಮನು ಕತ್ತಿ ಎತ್ತಿದಾಗ ಪಾರ್ಥಿವ ಲಿಂಗದಲ್ಲಿ ಶಿವನು ವ್ಯಕ್ತನಾಗಿ ಭೀಮನನ್ನೂ ಅವನ ಕಡೆಯವರನ್ನೂ ಭಸ್ಮ ಮಾಡಿದ ಸುದಕ್ಷಿಣನಿಗೆ ಅನುಗ್ರಹದೋರಿ ನೆಲೆಸಿದ ಶಿವನೇ ಭೀಮಶಂಕರ ಜ್ಯೋತಿರ್ಲಿಂಗ.

ವಿಶ್ವೇಶ್ವರ :-- ಅಮೂಲ್ಯ ಸೃಷ್ಟಿಯ ಉದ್ದೇಶದಿಂದ ತಪಸ್ಸಿಗೆ ಕುಳಿತ ಪ್ರಕೃತಿ ಪುರುಷರ ಕಾರ್ಯಕ್ಕೆ ಅನುಕೂಲವಾಗಲೆಂದು ಶಿವನು ತನ್ನ ತೇಜಸ್ಸಿನ ಸಾರದಿಂದ ಸುಂದರವಾದ ಪಟ್ಟಣವೊಂದನ್ನು ನಿರ್ಮಿಸಿದ. ಹರಿಯು ಈ ಪಟ್ಟಣವನ್ನಾಶ್ರಯಿಸಿ ಸೃಷ್ಟಿ ಮಾಡದೇಕೆಂದು ಶಿವನನ್ನು ಕುರಿತು ತಪಸ್ಸು ಮಾಡಿದಾಗ ಹರಿದ ಜಲಧಾರೆಯಲ್ಲಿ ಕಾಶೀಪಟ್ಟಣವು ನೀರಿನಲ್ಲಿ ತೇಲಿದಾಗ ಶಿವನು ಅದನ್ನು ತನ್ನ ತ್ರಿಶೂಲದಲ್ಲಿ ಧರಿಸಿದ. ಈ ನೀರಿನಲ್ಲಿ ವಿಷ್ಣುವು ಯೋಗನಿದ್ರೆಯಲ್ಲಿ ಮಲಗಿದಾಗ ಆತನ ನಾಭಿಕಮಲದಿಂದ ಜನಿಸಿದ ಬ್ರಹ್ಮನು ಶಿವನಾಜ್ಞೆ ಪಡೆದು ಹದಿನಾಲ್ಕು ಲೋಕಗಳನ್ನು ಒಳಗೊಂಡ ಬ್ರಹ್ಮಾಂಡವನ್ನು ಸೃಷ್ಟಿಸಿದ. ಶಿವನು ತನ್ನ ತ್ರಿಶೂಲದ ತುದಿಯಿಂದ ಕಾಶೀಕ್ಷೇತ್ರವನ್ನು ಭೂಲೋಕದಲ್ಲಿ ಸ್ಥಾಪಿಸಿದ. ರುದ್ರನ ಕೋರಿಕೆಯಂತೆ ಆ ಕ್ಷೇತ್ರದಲ್ಲಿ ವಿಶ್ವೇಶ್ವರನೆಂಬ ಜ್ಯೋತಿರ್ಲಿಂಗ ರೂಪದಲ್ಲಿ ನೆಲೆಸಿದ.

ತ್ರ್ಯಂಬಕೇಶ್ವರ :-- ನಾಸಿಕದಿಂದ ಹದಿನೆಂಟು ಮೈಲು ದೂರವಿರುವ ತ್ರ್ಯಂಬಕ ಕ್ಷೇತ್ರದ ಜ್ಯೋತಿರ್ಲಿಂಗವಿದು. ಅನಾವೃಷ್ಟಿ ನಿವಾರಣೆಗಾಗಿ ಗೌತಮನು ವರುಣನನ್ನು ಕುರಿತು ತಪಸ್ಸು ಮಾಡಲಾಗಿ ಸುಪ್ರೀತನಾದ ವರುಣನು ಗೌತಮನಿಂದ ಹಳ್ಳವನ್ನು ತೋಡಿಸಿ ಅದನ್ನು ದಿವ್ಯಜಲದಿಂದ ತುಂಬಿಸಿದ ಕಾರಣದಿಂದ, ಗೌತಮನ ಮೇಲೆ ಸಿಟ್ಟಾದ ಇತರ ಋಷಿಗಳು ತಪಸ್ಸಿನಿಂದ ಗಣೇಶನನ್ನು ಒಲಿಸಿಕೊಂಡು ಗೌತಮನ ಮೇಲೆ ಗೋಹತ್ಯಾ ಪಾಪ ಬರುವಂತೆ ಮಾಡಿ ಆತನನ್ನೂ ಆತನ ಪತ್ನಿಯನ್ನೂ ಹೊರಹಾಕಿದರು. ಆ ದೋಷ ನಿವಾರಣೆಗಾಗಿ ಗಂಗೆಯನ್ನು ತಂದು ಶಿವನ ಪಾರ್ಥಿವ ಲಿಂಗವನ್ನಿಟ್ಟು ಪೂಜೆ ಮಾಡಿ ದೋಷ ಪರಿಹಾರ ಮಾಡಿಕೊಂಡು ಗೌತಮನ ಕೇರಿಕೆಯಂತೆ ಶಿವನು ತ್ರ್ಯಂಬಕೇಶ್ವರನೆಂಬ ಹೆಸರಿನಲ್ಲಿ ಅಲ್ಲಿಯೇ ನೆಲೆಸಿದ.

ವೈದ್ಯನಾಥೇಶ್ವರ :-- ಔರಂಗಾಬಾದಿಗೆ ೧೫೦ ಮೈಲು ದೂರದಲ್ಲಿರುವ ಪರಲಿ ಕ್ಷೇತ್ರದ ಜ್ಯೋತಿರ್ಲಿಂಗವೇ ವೈದ್ಯನಾಥೇಶ್ವರ. ಶಿವನನ್ನು ಕುರಿತು ಘೋರ ತಪಸ್ಸನ್ನಾಚರಿಸುತ್ತಿದ್ದ ರಾವಣನು ಶಿವನ ದರ್ಶನವಾಗದಿದ್ದರಿಂದ ತನ್ನ ತಲೆಗಳನ್ನು ಒಂದೊಂದಾಗಿ ಕಡಿದು ಶಿವನಿಗೆ ಅರ್ಪಿಸಿ ಹತ್ತನೇ ತಲೆಯನ್ನು ಕಡಿದುಕೊಳ್ಳಲು ಉದ್ಯುಕ್ತನಾದಾಗ ಶಿವನು ಪ್ರತ್ಯಕ್ಷನಾಗಿ ವೈದ್ಯನಂತೆ ಆತನ ತಲೆಗಳನ್ನು ಮೊದಲಿನಂತೆ ಜೋಡಿಸಿದ. ರಾವಣನು ಪಾರ್ಥಿವ ಲಿಂಗವನ್ನು ಲಂಕೆಗೆ ತೆಗೆದುಕೊಂಡು ಹೋಗುವುದಾಗಿ ಕೇಳಿಕೊಳ್ಳಲು ಅದನ್ನು ದಾರಿಯಲ್ಲೆಲ್ಲೂ ಇಡಬಾರದೆಂದು ಎಚ್ಚರಿಸಿ ಕಳಿಸಿದ. ಆದರೆ ದೈವ ಮಾಯೆಯಿಂದ ಲಿಂಗವನ್ನು ನೆಲದ ಮೇಲೆ ಇಡದೇಕಾಗಿ ಬಂದಾಗ ಅದು ಅಲ್ಲಿಯೇ ಸ್ಥಿರವಾಗಿ ನೆಲೆಸಿ ಬಿಡುತ್ತದೆ. ಇದೇ ವೈದ್ಯನಾಥೇಶ್ವರ ಜ್ಯೋತಿರ್ಲಿಂಗ.

ನಾಗೇಶ್ವರ :-- ದ್ವಾರಕಾದಿಂದ ಸುಮಾರು ಇಪ್ಪತ್ತೆರಡು ಮೈಲಿ ದೂರವಿರುವ ನಾಗನಾಥಕ್ಷೇತ್ರದ ಲಿಂಗವೇ ನಾಗೇಶ್ವರ. ಪಾರ್ವತಿ ದೇವಿಯು ಅನುಗ್ರಹವಾಗಿ ಕೊಟ್ಟಿದ್ದ ವನದಲ್ಲಿ ದಾರುಕಾ ಎಂಬ ರಾಕ್ಷಸಿ, ಅವಳ ಗಂಡ ದಾರುಕ ಹಾಗೂ ಅವರ ಸಹಚರರು ವಾಸವಾಗಿದ್ದರು. ಅವರು ಜನರಿಗೆಲ್ಲಾ ತೊಂದರೆ ಕೊಡಲು ಉಪಕ್ರಮಿಸಿದಾಗ ಮುನಿಯೋರ್ವನು ಅವರನ್ನು ಶಪಿಸಿದ. ಶಾಪದಿಂದ ಭೂಮಿಯ ಮೇಲೆ ಶಕ್ತಿಗುಂದಿದ ರಾಕ್ಷಸರು ದಾರುಕಾವನ ಸಮೇತರಾಗಿ ಸಮುದ್ರದ ಮಧ್ಯದಲ್ಲಿದ್ದುಕೊಂಡು ಜನರನ್ನು ಹಿಂಸಿಸತೊಡಗಿದರು. ಸುಪ್ರಿಯನೆಂಬ ವೈಶ್ಯನನ್ನು ಸೆರೆಯಲ್ಲಿಟ್ಟಾಗ ಅವನು ಸೆರೆಮನೆಯಲ್ಲಿಯೇ ಪಾರ್ಥಿವ ಲಿಂಗವನ್ನು ಪೂಜಿಸುವುದನ್ನು ಮೆಚ್ಚಿ ಶಿವನು ಬಿಲದಲ್ಲಿ ವ್ಯಕ್ತನಾಗಿ ದಾರುಹಾಗೂ ಇತರರನ್ನು ಸಂಹರಿಸಿದನು. ಅಲ್ಲದೆ ಭಕ್ತರನ್ನು ಕಾಪಾಡುವುದಕ್ಕಾಗಿ ದಾರುಕಾವನದಲ್ಲಿ ನಾಗೇಶ್ವರನೆಂದು ಜ್ಯೋತಿರ್ಲಿಂಗರೂಪದಲ್ಲಿ ನೆಲೆಸಿದ.

ರಾಮೇಶ್ವರ :-- ರಾವಣನು ಲಂಕೆಗೆ ಕದ್ದೊಯ್ದ ಸೀತೆಯನ್ನು ಹುಡುಕುತ್ತಾ ವಾನರ ವೀರರೊಂದಿಗೆ ಹೊರಟ ರಾಮನಿಗೆ ಬಾಯಾರಿಕೆಯಾಗಲು ಲಕ್ಷ್ಮಣನು ನೀರು ತಂದುಕೊಟ್ಟ. ನೀರು ಕುಡಿಯುವಾಗ ತಾನು ಶಿವಪೂಜೆ ಮಾಡದಿರುವುದು ನೆನಪಿಗೆ ಬಂದು ಬಾಯಾರಿಕೆ ಇಂಗಿದ ನಂತರ ಸಮುದ್ರತೀರದಲ್ಲಿ ಲಿಂಗವನ್ನಿಟ್ಟು ಪೂಜಿಸಿದ. ರಾಮನ ಪೂಜೆಗೆ ಒಲಿದ ಶಿವನು ಪ್ರತ್ಯಕ್ಷನಾಗಿ ರಾಮ ರಾವಣರ ಯುದ್ಧದಲ್ಲಿ ರಾಮನಿಗೆ ಜಯವಾಗಲಿ ಎಂದು ಅನುಗ್ರಹಿಸಿದ್ದಲ್ಲದೇ ರಾಮನ ಕೋರಿಕೆಯಂತೆ ರಾಮೇಶ್ವರದಲ್ಲಿ ಜ್ಯೋತಿರ್ಲಿಂಗ ರೂಪದಲ್ಲಿ ನೆಲೆಸುತ್ತಾನೆ.

ಘುಶ್ಮೇಶ :-- ದೌಲತಾಬಾದ ರೇಲ್ವೆ ನಿಲ್ದಾಣಕ್ಕೆ ಹನ್ನೆರಡು ಮೈಲು ದೂರದಲ್ಲಿರುವ ವೆರಲ್‌ಗ್ರಾಮದಲ್ಲಿರುವ ಜ್ಯೋತಿರ್ಲಿಂಗವೇ ಘುಶ್ಮೇಶ. ಹಿಂದಿನ ದೇವಗಿರಿ ಪರ್ವತದ ಸಮೀಪದಲ್ಲಿದ್ದ ಸುಧರ್ಮ, ಸುದೇಹಿ ಎಂಬ ಶಿವಭಕ್ತ ದಂಪತಿಗಳಿಗೆ ಬಹಳ ಕಾಲ ಮಕ್ಕಳಿಲ್ಲದಿರಲು ಸುದೇಹಿಯು ತನ್ನ ತಂಗಿಯಾದ ಘುಶ್ಮೆಯನ್ನು ಸುಧರ್ಮನಿಗೆ ತಂದು ವಿವಾಹಮಾಡುತ್ತಾಳೆ. ಘುಶ್ಮೆಯು ದಿನಾಲು ನೂರಾ ಒಂದು ಶಿವಲಿಂಗಗಳನ್ನು ಪೂಜಿಸಿ ಸರೋವರದಲ್ಲಿ ವಿಸರ್ಜಿಸಲು ಶಿವನ ಕೃಪೆಯಿಂದಾಗಿ ಘುಶ್ಮೆಗೆ ಗಂಡು ಮಗುವಾಗುತ್ತದೆ. ಕ್ರಮೇಣ ಸವತಿಮಾತ್ಸರ್ಯ ಉಂಟಾದ ಸುದೇಹಿಯು ಘುಶ್ಮೆಯ ಮಗುವನ್ನು ಕೊಂದು ಸರೋವರಕ್ಕೆ ಎಸೆದಳು. ಆದರೆ ಶಿವನ ಅನುಗ್ರಹದಿಂದ ಘುಶ್ಮೆಯ ಮಗನು ಬದುಕಿದುದಲ್ಲದೇ ಅವಳ ಕೋರಿಕೆಯಂತೆ ಲೋಕೋದ್ಧಾರಕ್ಕಾಗಿ ಘುಶ್ಮೇಶ ಎಂಬ ಹೆಸರಿನಲ್ಲಿ ಜ್ಯೋತಿರ್ಲಿಂಗವಾಗಿ ನೆಲೆಸಿದ.

* * *

# ಗೋಕರ್ಣ

---ಭಗವಾನ್.

ಕರ್ನಾಟಕದ ಮೂಲೆ ಮೂಲೆಯಲ್ಲಿ ಭವ್ಯ ತೀರ್ಥಗಳು, ಪುಣ್ಯಕ್ಷೇತ್ರಗಳೂ ತುಂಬಿತುಳುಕುತ್ತಿವೆ. ಅಸಾಧಾರಣ ಸಿದ್ಧಪುರುಷರುಗಳು - ಯೋಗಿಗಳ ನೆಲೆವೀಡಾದ ಈ ಭರತಭೂಮಿ ಬಹುಶಃ ದೇವತೆಗಳನ್ನು ಸೆಳೆದಿರಲು ಸಾಕು. ಹಾಗಾಗಿಯೇ ಕೈಲಾಸದಲ್ಲಿ ಇರಬೇಕಾದ ದೇವತೆಗಳೆಲ್ಲಾ ಭುವಿಗಿಳಿದು 'ಭೂಕೈಲಾಸ'ವೆಂದು ಪ್ರಸಿದ್ಧಿಗೊಂಡ ಕ್ಷೇತ್ರ ಒಂದು ನಮ್ಮ ರಾಜ್ಯದಲ್ಲೇ ಇರುವುದು ಹೆಮ್ಮೆಯ ಸಂಗತಿಯಲ್ಲವೇ ? ಈ ತಾಣ ಕೇವಲ ಪುಣ್ಯಕ್ಷೇತ್ರವಾಗಿ ಮಾತ್ರವಲ್ಲ, ಉತ್ತಮ ಪ್ರಕೃತಿ ಸೌಂದರ್ಯದ ಮಡಿಲೂ ಆಗಿ ರಮಣೀಯವೆನಿಸಿದೆ. ಇದೇ ಗೋಕರ್ಣ. ಭೂಮಿಯ ಮೇಲೆ ಸಾವಿರಾರು ತೀರ್ಥಕ್ಷೇತ್ರಗಳಿವೆ. ಕಾಶಿ, ಪ್ರಯಾಗ, ಗಯಾಗಳು ಮೇರು ಸಮಾನ ಪುಣ್ಯದಾಯಕಗಳಾಗಿದ್ದರೂ ಗೋಕರ್ಣ ಅದಕ್ಕಿಂತ ಅಧಿಕ ಪುಣ್ಯದಾಯಿ ಕ್ಷೇತ್ರವೆಂಬುದಕ್ಕೆ ಈ ಶ್ಲೋಕವೇ ಸಾಕ್ಷಿ.

ಪೃಥಿವ್ಯಾಂ ಯಾನಿ ತೀರ್ಥಾನಿ
ಸಾಗರಂಚ ಪ್ರವಿಶಂತಿಃ
ಗಂಗಾದಿ ಸರಿತೋಯಸ್ಮಾತ್
ಗೋಕರ್ಣಂ ತದ್ವಿಶೇಷ್ಯತೆ"

ಭೂಮಿಯಲ್ಲಿರುವ ಎಲ್ಲ ಪವಿತ್ರ ನದಿಗಳೂ ಸಾಗರವನ್ನೇ ಸೇರುತ್ತವೆ. ಇಂತಹ ಸಾಗರ ಗೋಕರ್ಣದಲ್ಲಿದ್ದು, ಮಹಾಬಲೇಶ್ವರ, ಕೋಟಿ ತೀರ್ಥಗಳಲ್ಲಿರುವುದರಿಂದ ಗೋಕರ್ಣದ ಪುಣ್ಯರಾಶಿ ಅಗಾಧವಾದುದೆಂಬ ನಂಬಿಕೆ ಆಸ್ತಿಕರದ್ದಾಗಿದೆ.

ಶಿವರಾತ್ರಿ - ಶಿವದರ್ಶನಕ್ಕೆ ಮಹತ್ತರವಾದ ದಿನ. ಸ್ವಯಂ ಶಿವನ ಆತ್ಮಲಿಂಗವೇ ನೆಲೆನಿಂತ ಗೋಕರ್ಣದಲ್ಲಿ ಆ ಶಿವನ ದರ್ಶನ ಮಾಡಲು ಪ್ರತಿದಿನ ಸಹಸ್ರಾರು ಭಕ್ತರು ನೆರೆಯುವ ಸಂದರ್ಭದಲ್ಲಿ ಶಿವರಾತ್ರಿಯಂದು ಕೇಳಬೇಕೆ? ಲಕ್ಷಾಂತರ ಮಂದಿ ಭಾವುಕರ ಜಾತ್ರೆಯೇ ನೆರೆಯುತ್ತದೆ. ಈ ಗೋಕರ್ಣವು ತ್ರಿಸ್ಥಲಿ, ಸಿದ್ಧಿಕ್ಷೇತ್ರ, ಭಾಸ್ಕರ ಕ್ಷೇತ್ರಗಳೆಂಬ ತ್ರಿವಿಧ ಪುಣ್ಯಸ್ಥಾನವಾಗಿರುವುದು ಮತ್ತೊಂದು ವಿಶೇಷ. ಸ್ವಯಂ ಶಿವನೇ ದೇವತೆಗಳಿಗೆ ಹೇಳಿದ ಪ್ರಕಾರ --

"ಮಾಘಮಾಸ್ಯಾಸಿತೇಪಕ್ಷೇ
ಯಾ ಭವೇಚ್ಚ ಚತುರ್ದಶಿ,
ತಸ್ಯಾ ನಿಶೀತಿ ಸಮಯೇ
ಲಿಂಗ ರತ್ನಂ ಮಹಾಬಲಂ
ಏಕೇನ ಬಿಲ್ವಪತ್ರೇಣ
ಅಣುಮಾತ್ರ ಜಲೇನವಾ,
ದ್ರೋಣಪುಷ್ಪೇನ ಗಂಧೇನ
ಯಃ ಪೂಜನೇ ನರೋತ್ತಮ"

ಶಿವರಾತ್ರಿಯ ಈ ದಿನ ಒಂದು ಹನಿ ನೀರು, ಗಂಧ, ಬಿಲ್ವಪತ್ರ ಹಾಗೂ ತುಂಬೆ ಹೂಗಳಿಂದ ನನ್ನ ಅರ್ಚಿಸುವ ಸುಯೋಗ ಮಹಾಪುಣ್ಯವಂತರಿಗೆ ಮಾತ್ರ ಲಭ್ಯ.....

ಇಂತಹ ಪುಣ್ಯ ಪಡೆಯಲು ಯಾರು ತಾನೆ ಇಚ್ಛಿಸದಿರುತ್ತಾರೆ ? ಹಾಗೆಂದೇ ಮಹಾಶಿವರಾತ್ರಿಯಂದು ಗೋಕರ್ಣದಲ್ಲಿ ಜನಗಳ ಮಹಾಜಾತ್ರೆಯೇ. 'ಗೋಕರ್ಣ' - ಈ ಹೆಸರು ಈ ಊರಿಗೆ ಬಂದ ವಿಚಾರವಾಗಿ ತಿಳಿದು ಬರುವ ಪುರಾಣ ಕಥೆ ಎಂದರೆ ರುದ್ರನು ತಂದೆಯಾಜ್ಞೆಯಂತೆ ಸಾತ್ವಿಕ ಪ್ರಜೆಗಳನ್ನು ಸೃಷ್ಟಿಸುವ ಶಕ್ತಿ ಪಡೆಯಲು ಪ್ರಳಯಜಲದಲ್ಲಿ ಮುಳುಗಿ ಕುಳಿತು ತಪಸ್ಸು ಮಾಡತೊಡಗಿದ. ಇತ್ತ ಬ್ರಹ್ಮ ತ್ರಿಗುಣಾತ್ಮಕ ಸೃಷ್ಟಿಯನ್ನು ಮಾಡಿದ. ಇದು ತಿಳಿದು ಹೊರಬರಲು ಹೊರಟ ರುದ್ರನಿಗೆ ಭೂದೇವಿ ಅಡ್ಡಿಯಾದಳು. ಹಾಗೂ ರುದ್ರನನ್ನು ಶಾಂತಗೊಳ್ಳುವಂತೆ ಆಕೆ ಬಿನ್ನವಿಸಿದಳು. ಆಗ ರುದ್ರನು ಅಂಗುಷ್ಠರೂಪನಾಗಿ ಆಕೆಗೆ ವೇದನೆಯಾಗದಂತೆ ನಾಭಿಯನ್ನು ಹೊಕ್ಕು ಕಿವಿಯಿಂದ ಹೊರಬಂದು 'ದೇವಿಯೇ, ಈ ಸ್ಥಳವು 'ಗೋಕರ್ಣ'ವೆಂದು ಪ್ರಸಿದ್ಧಿಯಾಗಲಿ, ಅವಿನಾಶಿಯಾಗಲಿ' ಎಂದು ಹರಸಿದನಂತೆ.

ಮಹಾಬಲೇಶ್ವರ ದೇವಾಲಯದ ಪ್ರದಕ್ಷಿಣಾ ಪಥದಲ್ಲಿರುವ 'ಆದಿಗೋಕರ್ಣ' ರುದ್ರನು ಹೊರಬಂದ ಸ್ಥಳವೆಂಬ ಪ್ರತೀತಿ ಇದೆ. ಆ ಹೆಸರಿನ ಲಿಂಗವೂ ಸ್ಥಾಪಿಸಲ್ಪಟ್ಟಿದೆ. ಈ ಲಿಂಗವಿರುವ ಜಾಗವು ಸಮುದ್ರ ಪಾತಳಕ್ಕಿರುವ ತಗ್ಗಿನಲ್ಲಿದ್ದು ಇದು ಯಾರಿಂದ ಯಾವಾಗ ಸ್ಥಾಪಿತವಾಯಿತೆಂಬುದು ತಿಳಿದಿಲ್ಲದಿದ್ದರೂ ಒಂದು ಪ್ರೇಕ್ಷಣೀಯ ಸ್ಥಳವಾಗಿದೆ.

ಮಹಾಬಲೇಶ್ವರನೆಂದು ಗೋಕರ್ಣದ ಶಿವನಿಗೆ ಹೆಸರು ಬರಲು ಕಾರಣ, ಮಹಾಬಲಿಯಾದ ರಾವಣನು ತಂದ ಲಿಂಗವನ್ನು ವಟುವಿನ ರೂಪದ ಗಣಪನು ನೆಲದಲ್ಲಿಟ್ಟಾಗ, ಶಿವನು ಮೊದಲೇ ನೀಡಿದ ಸೂಚನೆಯಂತೆ ಅದು ಸಪ್ತಪಾತಾಳಗಳ ಪರ್ಯಂತ ಬೆಳೆಯಿತು. ಅದನ್ನು ಕಿತ್ತೊಯ್ಯಲು ಶ್ರಮಿಸಿದ ಮಹಾಬಲಿಯಾದ ರಾವಣನೇ ಸೋತು ಹೋದುದರಿಂದ ಶಿವನಿಗಿಲ್ಲಿ ಮಹಾಬಲೇಶ್ವರನೆಂಬ ಹೆಸರು ಬಂದಿತು. ಗೋಕರ್ಣದ ದರ್ಶನಕ್ಕೆ ಬರುವ ಜನ ಮೊದಲು ಕಾಣಬೇಕಾದುದು ಗಣಪ್ರಥಮನಾದ ವಿನಾಯಕನನ್ನು. ಆದಿಪೂಜೆ ಸಲ್ಲುವುದು ವಟುವಿನ ವೇಷದಲ್ಲಿ ನಿಂತ ಭಂಗಿಯಲ್ಲಿರುವ ವಿನಾಯಕನಿಗೆ. ಆತ ತಲೆಯ ಮೇಲೊಂದು



ಗುಂಡಿಯೂ ಕಂಡುಬರುತ್ತದೆ. ಅದು 'ಕೋಪ ಗೊಂಡ ರಾವಣ ಗುದ್ದಿದ ಜಾಗ' ಎಂದು ತಿಳಿಸುತ್ತಾರೆ.

ಸ್ಪರ್ಶಾನುಭವದಿಂದ ವೇದ್ಯವಾಗುವ ಹಾಗೂ ಅಣು ಮಾತ್ರ ಕಂಡು ಬರುವ ಗೋಕರ್ಣೇಶ್ವರ ಸಾಗರದ ತಡಿಯಲ್ಲಿಯೇ ಭವ್ಯ ದೇವಾಲಯದಲ್ಲಿ ಪಶ್ಚಿಮಾಭಿಮುಖವಾಗಿದ್ದಾನೆ. ವಿವಿಧ ಪ್ರದಕ್ಷಿಣಾ ಪಾಳಿಗಳಲ್ಲಿ ಇತರ ದೇವಾಲಯಗಳೂ ನೋಡಲು ಲಭ್ಯವಾಗುತ್ತವೆ. ಮಹಾಬಲಿ ಲಿಂಗವು ಕೃತಯುಗದಲ್ಲಿ ಬಿಳಿದೂ, ತ್ರೇತಾಯುಗದಲ್ಲಿ ಬಹಳ ಕೆಂಪು ಬಣ್ಣದ್ದೂ, ದ್ವಾಪರದಲ್ಲಿ ಹಳದೀ ಬಣ್ಣದಲ್ಲಿದ್ದುದು ಈಗ ಕಲಿಯುಗದಲ್ಲಿ ಕಪ್ಪು ಬಣ್ಣದ್ದಾಗಿ ಕಂಡು ಬರುತ್ತಿದೆ ಎಂಬ ಹೇಳಿಕೆ, ಈ ಲಿಂಗ ಯುಗಯುಗಾಂತರಗಳ ಹಿಂದಿನದೆಂಬುದನ್ನು ಸಾಬೀತು ಪಡಿಸುತ್ತದೆ. ಈ ಭವ್ಯವಾದ ಶಿಲಾಮಂದಿರವು ಗರ್ಭ ಗುಡಿ, ಸುಕನಾಸಿ ಅಂಕಣ ಹಾಗೂ ನವರಂಗಗಳನ್ನು ಹೊಂದಿದೆ. ನವರಂಗದ ಎಡಬಲಗಳಲ್ಲಿ ಗಣಪತಿ ಮತ್ತು ಅಮ್ಮನವರ ವಿಗ್ರಹಗಳಿವೆ. ಎತ್ತರ ಗರ್ಭ ಗುಡಿಯ ಮೇಲಿನ ಗೋಪುರ ಬಹುದೂರದವರೆಗೆ ಶಿವಾಲಯದ ಇರುವನ್ನು ಅರುಹುತ್ತದೆ.

ಗೋಕರ್ಣದ ತಾಮ್ರ ಗೌರಿಯ ದರ್ಶನವಾಗದಿದ್ದರೆ ಆ ಯಾತ್ರೆ ಅಪೂರ್ಣವೇ. ತಪಸ್ಸು ಮಾಡುತ್ತಿದ್ದ ಬ್ರಹ್ಮನ ಬಲಗೈನಿಂದ ನದಿಯೊಂದು ಹುಟ್ಟಿ— ಸ್ತ್ರೀ ಮೂರ್ತಿಯಾಯಿತು. ಇವಳೇ ಗೌರಿ. ಬ್ರಹ್ಮನು "ರುದ್ರನನ್ನು ಮದುವೆಯಾಗೆಂದು" ಹರಸಿದಾಗ ತಾಮ್ರತಲ ಪರ್ವತದಲ್ಲಿ ತಪಸ್ಸು ಮಾಡಿ ರುದ್ರನನ್ನು ಪಡೆದಳಂತೆ. ಆದ್ದರಿಂದ ತಾಮ್ರ ಗೌರಿ ಎಂಬ ಹೆಸರು ಈಕೆಗಾಯಿತು. ಈ ದೇವಿಯು ಕೈಯಲ್ಲಿ ತಕ್ಕಡಿ ಹಿಡಿದು ಕಾಶಿ ಗೋಕರ್ಣಗಳನ್ನು ತೂಗಿ ಗೋಕರ್ಣದ ಮಹಿಮೆ ಅಧಿಕವೆಂದು ತಿಳಿಸುತ್ತಿದ್ದಾಳೆ ಎಂಬ ಅನಿಸಿಕೆ ಇದೆ.

ಕೋಟಿತೀರ್ಥವಿರದ ಗೋಕರ್ಣ ನೆನೆಯಲೇ ಅಸಾಧ್ಯ. ಪಿತೃ ಕರ್ಮಾದಿಗಳನ್ನು ಮಾಡುವ ಈ ಜಾಗ ಹಲವು ತೀರ್ಥಗಳ ಸಂಗಮವಾಗಿದೆ. 'ಹಿಂದೆ ಶತಶೃಂಗ ಪರ್ವತದಲ್ಲಿ ಅನೇಕ ದೇವತೆಗಳು, ಮಹರ್ಷಿಗಳೂ, ಅಸಂಖ್ಯ ತೀರ್ಥಗಳೂ ಇದ್ದು ಗರುಡನು ದುರ್ಮುಖವೆಂಬ ಸರ್ಪವನ್ನು ಕಚ್ಚಿಕೊಂಡು ಹಾರುವಾಗ ಕೆಳಗೆ ನೋಡಲು ಆ ಉರಗವು ಜಾರಿ ಬಿದ್ದಿತಂತೆ. ಶತಶೃಂಗ ಪರ್ವತದಲ್ಲಿ ಅಡಗಿದ ಆ ಸರ್ಪವು ಗರುಡನಿಗೆ ದೊರೆಯದಾದಾಗ ಸಿಟ್ಟಿಗೆದ್ದು ಗರುಡ ಆ ಪರ್ವತವನ್ನೇ ಹೊತ್ತು ಹಾರತೊಡಗಿದ. ಇದನ್ನರಿತ ಬ್ರಹ್ಮನು ಮೂರು ಲೋಕಗಳ ಭಾರವನ್ನು ಗರುಡನ ಮೇಲೆ ಹಾಕಲು ಆಯಾಸಗೊಂಡ ಗರುಡನು ಗೋಕರ್ಣದಲ್ಲಿ ತಪಸ್ಸಿಗೆ ಕುಳಿತ ಅಗಸ್ತ್ಯ ಮಹರ್ಷಿಯನ್ನು ಕಾಪಾಡಲು ಕೇಳಿದನಂತೆ. ಶತಶೃಂಗ ಪರ್ವತವನ್ನು ಮುನಿಯು ಸಮುದ್ರದಲ್ಲಿ ಯೋಗಶಕ್ತಿಯಿಂದ ಇಳಿಸಿದನಂತೆ. ಅಲ್ಲಿಯ ಎರಡು ಕೋಟಿ ತೀರ್ಥಗಳಲ್ಲಿ ಒಂದು ಕೋಟಿ ತೀರ್ಥ ಆ ಪರ್ವತದ ಉತ್ತರ ಭಾಗದಲ್ಲಿ ಒಟ್ಟುಗೂಡಿ ಒಂದೇ ತೀರ್ಥವಾಗಿ ಹರಿದು ಕೋಟಿತೀರ್ಥವಾಗಿ ಪರಿಣಮಿಸಿತು ಎಂಬುದು ಐತಿಹ್ಯ ಪುರಾಣಗಳಿಂದ ತಿಳಿದು ಬರುತ್ತದೆ.

ಕಡಲ ತಡಿಯ ಗೋಕರ್ಣ ಸುಂದರವಾದ ಬೀಚುಗಳನ್ನು ಹೊಂದಿದೆ. ವಿಶುದ್ಧವಾದ ನೀಲಿ ನೀರಿನ ಹರಹು ದಿಗಂತದೊಡನೆ ಸ್ಪರ್ಧಿಸುತ್ತ ದಡದೆಡೆಗೆ ಕೊನೆ ಇರದ ತರಂಗಗಳನ್ನು, ಬಿಳಿ ನೊರೆಯನ್ನು ಹರಿಸುವುದನ್ನು ನೋಡುತ್ತಿದ್ದರೆ ಸಮಯ ಜಾರಿದ್ದೆ ಅರಿಯದು. ದಡದ ತೆಂಗಿನ ಗಿಡಗಳು ಎತ್ತರದಲ್ಲಿ ಮಹಾಬಲೇಶ್ವರನಿಗೆ ಬೀಸುತ್ತಿರುವ ಚಾಮರಗಳಂತೆ ಕಂಡುಬಂದರೆ ಎಲ್ಲೆಲ್ಲಿಯೂ ಕಂಡು ಬರುವ ಹರಿದ್ವರ್ಣ ಪಾರ್ವತಿಗುಡಿಸಿದ ಹಸಿರು ಸೀರೆಯಂತೆ ಕಂಡುಬಂದರೆ ಅತಿಶಯವಿಲ್ಲ.

ಗೋಕರ್ಣದ ನೆಲದ ಅಡಿ ಅಡಿಯೂ ಒಂದೊಂದು ದೇವರ, ಒಂದೊಂದು ತೀರ್ಥದ ಆಗರ. ಅತ್ಯಂತ ಸಂಕೀರ್ಣವಾದ ಊರು ಭಕ್ತರಿಂದ, ಅಗಾಧ ಜನಜಂಗುಳಿಯಿಂದ ತುಂಬಿತುಳುಕುವುದರಿಂದ ಮಳೆಗಾಲದ ದಿನದಲ್ಲಿ ಶುಚಿತ್ವದ ಬಗ್ಗೆ ಗಮನಹರಿಸುವುದು ಅಸಾಧ್ಯವೆನಿಸುವುದು. ಇತ್ತೀಚೆಗೆ ಗೋವಾ ಬೀಚುಗಳಿಂದ ಬಂದ ಹಿಪ್ಪಿಗಳ ದಂಡು ಅತಿಯಾಗುತ್ತಿರುವುದೂ ಗಣನೀಯವಾಗಿ ಪ್ರಭಾವ ಬೀರಿದೆ.

ಗೋಕರ್ಣದ ಪ್ರಮುಖ ದೇವಾಲಯಗಳಾದ ವೆಂಕಟರಮಣ, ಭದ್ರಕಾಳಿ, ಭರತನ, ದೇವಾಲಯಗಳೇ ಅಲ್ಲದೆ ವಿವಿಧ ಮಠಮಾನ್ಯಗಳೂ ದರ್ಶನೀಯವೆ. ಉತ್ತಮ ಗ್ರಂಥಾಲಯ, ವೇದವಿದರ ನೆಲೆವೀಡಾದ ಗೋಕರ್ಣ ಪ್ರೇಕ್ಷಕರ ಆಕರ್ಷಣೆಯ ತಾಣವಾಗಿ ಬಂದ ಅತಿಥಿಗಳ ಸೇವೆಯಲ್ಲಿ ತೊಡಗುವ ಅನೇಕ ಮನೆಗಳು ಗೋಕರ್ಣದ ಮತ್ತೊಂದು ವಿಶೇಷವೇ ಆಗಿದೆ. ಇಲ್ಲಿಯ ವಿವಿಧ ಉತ್ಸವಗಳು, ಪರ್ವಕಾಲಗಳು ಎಂದೆಂದೂ ಪ್ರವಾಸಿಗರನ್ನು ತನ್ನೆಡೆಗೆ ಸೆಳೆಯುವ ಕಾರ್ಯದಲ್ಲಿ ಸಮರ್ಥವಾಗಿವೆ.

(ಕೃಪೆ - ಹೊಸ ದಿಗಂತ)



## ಎಚ್ಚರಿಕೆ

ಕರ್ನಾಟಕ ಹಾಗೂ ತಮಿಳುನಾಡುಗಳ ಹಲವು ಪ್ರಾಂತ್ಯಗಳಲ್ಲಿ ತಾನು ತಿ. ತಿ. ದೇವಸ್ಥಾನಗಳ ಅರ್ಚಕ ಮಿರಾಸಿದಾರ ಎಂದು ನಟಿಸುತ್ತ, ಎಂ. ಆರ್. ರಂಗನಾಥನ್ ಅಯ್ಯಂಗಾರ್ ಎಂಬ ವ್ಯಕ್ತಿ ಆರ್ಜಿತಸೇವೆಯ ನಕಲಿ ಟಿಕೆಟ್‌ಗಳನ್ನು ಅಮಾಯಕಯಾತ್ರಿಕರಿಗೆ ಮಾರುತ್ತಿರುವುದು ವರದಿಯಾಗಿದೆ. ಬೇರೆ ಬೇರೆ ಆರ್ಜಿತಸೇವೆಗಳ ಟಿಕೆಟ್‌ಗಳನ್ನು ತಿರುಮಲೆಯ ಆರ್ಜಿತ ಸೇವೆ ಕಚೇರಿಯಿಂದ ಮಾತ್ರವೇ ತಿ. ತಿ. ದೇವಸ್ಥಾನಗಳು ಮಾರಾಟ ಮಾಡುತ್ತಿದೆ. ಇತರ ರೀತಿಯಲ್ಲಿ ಅಲ್ಲ.

ಮೇಲ್ಕಂಡ ವ್ಯಕ್ತಿಯ ವಂಚನೆಯ ಕ್ರಮಗಳತ್ತ ಯಾತ್ರಿಕರ ಗಮನವನ್ನು ಸೆಳೆಯುತ್ತ, ಯಾವುದೇ ಮೂರನೆಯ ವ್ಯಕ್ತಿಯಿಂದಲೂ ಯಾವುದೇ ಸೇವೆಯ ಟಿಕೆಟ್‌ಗಳನ್ನೂ ಕೊಂಡುಕೊಳ್ಳಬಾರದೆಂದೂ, ಈ ಬಗ್ಗೆ ಪೋಲೀಸರಿಗೆ ತಿಳಿಸಬೇಕೆಂದೂ ಯಾತ್ರಿಕರನ್ನು ಕೋರಲಾಗಿದೆ.

ಈ ವ್ಯಕ್ತಿಯ ಇರುವಿಕೆಯ ಬಗ್ಗೆಯಾಗಲೀ, ಹಿಡಿಯುವುದರಲ್ಲಿ ಆಗಲೀ ನೆರವು ನೀಡಿದವರಿಗೆ ತಿ. ತಿ. ದೇವಸ್ಥಾನಗಳಿಂದ ಸೂಕ್ತ ಬಹುಮಾನ ನೀಡಲಾಗುತ್ತದೆ.

ಕಾರ್ಯನಿರ್ವಹಣಾಧಿಕಾರಿ

# ಪ್ರಸ್ಥಾನತ್ರಯ

---ವಿದ್ವಾನ್ 'ರಘುಸುತ'.

ಅಧ್ಯಾತ್ಮಿಕ ಸಾಧನೆಗೆ ಶ್ರವಣ, ಮನನ, ನಿದಿಧ್ಯಾಸನ ಎನ್ನುವ ಮೂರು ಮುಖ್ಯ ಮಾರ್ಗಗಳಿವೆ ಎಂದು ಹೇಳಲಾಗುತ್ತದೆ. ಇವೇ 'ಪ್ರಸ್ಥಾನತ್ರಯ' ಎಂದು ಪ್ರಸಿದ್ಧಿ ಪಡೆದಿವೆ.

ಉಪನಿಷತ್ತುಗಳಿಂದ ಶ್ರವಣ, ಬ್ರಹ್ಮಸೂತ್ರಗಳಿಂದ ಮನನ, ಭಗವದ್ಗೀತೆಯಿಂದ ನಿದಿಧ್ಯಾಸನಗಳು ಸಾಧ್ಯವಾಗುತ್ತದೆ. ಈ ಮೂರೂ ಗ್ರಂಥರಾಶಿಗಳು ವೇದಾಂತ ಸಿದ್ಧಾಂತಗಳಿಗೆಲ್ಲ ಮೂಲ ಬೇರಿನಂತವುಗಳಾಗಿವೆ.

ಉಪನಿಷತ್ತುಗಳಲ್ಲಿನ ವಾಕ್ಯಗಳಿಗೆ ಸಮನ್ವಯವನ್ನು ಸಂಘಟಿಸುವುದಕ್ಕಾಗಿಯೇ ಬ್ರಹ್ಮಸೂತ್ರಗಳು ಅವತರಿಸಿದುವು. ಅಂತೆಯೇ ಭಗವದ್ಗೀತೆಯು ಎಲ್ಲ ವೇದಾರ್ಥಗಳನ್ನು ಸಂಗ್ರಹ ರೂಪದಲ್ಲಿ ವಿವರಿಸುತ್ತವೆ.

## ೧. ಉಪನಿಷತ್ತುಗಳು :

ಭಾರತೀಯ ಜ್ಞಾನ ಭಂಡಾರದಲ್ಲಿನ ಗಣಿಯಂತಹವುವೇದಗಳು. 'ವಿತ್ ಜ್ಞಾನೇ' ಎನ್ನುವ ಧಾತುವಿನಿಂದ 'ವೇದ' ಶಬ್ದವು ಸಮುತ್ಪನ್ನವಾಗಿದೆ. ಅಂತಹ ವೇದ ವೈಶಿಷ್ಟ್ಯವನ್ನು ಉಪನಿಷತ್ತುಗಳಲ್ಲಿ ಕಾಣಬಹುದು. ಆತ್ಮವಿದ್ಯೆಯ ರಹಸ್ಯ ಬ್ರಹ್ಮವಿದ್ಯಾರಹಸ್ಯ - ಎನ್ನುವುಗಳನ್ನು ಉಪನಿಷತ್ತುಗಳಲ್ಲಿ ವಿಪುಲವಾಗಿ ತಿಳಿಸಲಾಗಿದೆ. 'ಉಪನಿಷತ್ತು' ಎನ್ನುವ ಶಬ್ದಕ್ಕೆ 'ಬ್ರಹ್ಮಶಬ್ದ' ಎನ್ನುವುದೇ ಅರ್ಥ. ವೇದವನ್ನು ಓರ್ವ ವ್ಯಕ್ತಿ ಎಂದು ಭಾವಿಸಿದಲ್ಲಿ, ಉಪನಿಷತ್ತುಗಳನ್ನು ಅವನ ಶಿರಸ್ಸು ಎಂದು ತಿಳಿಯಬೇಕು.

'ಉಪ' - 'ನಿ' ಇವೆರಡೂ ಉಪಸರ್ಗಗಳು. 'ಸದ' ಧಾತುವು 'ಗತಿ' ಎನ್ನುವ ಅರ್ಥವನ್ನು ಸೂಚಿಸುತ್ತದೆ. 'ಗತಿ' ಎನ್ನುವ ಪದಕ್ಕೆ ಜ್ಞಾನ, ಗಮನ, ಪ್ರಾಪ್ತಿ ಎನ್ನುವ ಮೂರು ಅರ್ಥಗಳಿವೆ. ಇಲ್ಲಿ 'ಪ್ರಾಪ್ತಿ' ಎನ್ನುವ ಅರ್ಥವು ಸಮನ್ವಯವಾಗುವುದು. ಅಂದರೆ 'ಉಪ=ಸಾಮಾನ್ಯೇನ, ನಿ=ನಿತರಾಂಪ್ರಾಪ್ನುವಂತಿ ಪರಂಬ್ರಹ್ಮಯಯಾ ವಿದ್ಯಯಾ ಸಾ ಉಪನಿಷತ್ ಎನ್ನುವುದು ಇದರ ನಿರ್ವಚನೆ. ಅಂದರೆ ಯಾವ ವಿದ್ಯೆಯಿಂದ ಪರಬ್ರಹ್ಮನ ಸಾಮಿಪ್ಯ - ತಾದಾತ್ಮ್ಯಗಳು ಪ್ರಾಪ್ತವಾಗುವುವೊ ಅದೇ 'ಉಪನಿಷತ್' ಎಂದು ಹೇಳಲಾಗುವುದು.

'ಉಪ' + 'ನಿ' ಎನ್ನುವ ಎರಡು ಉಪಸರ್ಗಗಳನ್ನು - 'ಸದ' ಧಾತುವಿನೊಂದಿಗೆ 'ಕ್ವಿಪ್' ಪ್ರತ್ಯಯವನ್ನು ಸೇರಿಸಿದಾಗ 'ಉಪನಿಷತ್ತು' ಎನ್ನುವ ಪದವು ಸೃಷ್ಟಿಯಾಗುತ್ತದೆ.

'ಸದ' ಧಾತುವು ವಿಶರಣ (ವಿನಾಶ), ಗತಿ (ಜ್ಞಾನ, ಪ್ರಾಪ್ತಿ) ಹಾಗೂ ಅವಸಾದನ (ಶೈಥಿಲ್ಯ ಅಥವಾ ವಿಶ್ಲೇಷ) ಎನ್ನುವ ಮೂರು ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತಿದೆ. ಇದನ್ನು ಅನುಸರಿಸಿ, ಪಾಪ - ತಾಪಗಳನ್ನು ಉಪಶಮನ ಮಾಡುವುದೆ 'ಉಪನಿಷತ್ತು' ಎನ್ನುವುದು ಸ್ಪಷ್ಟವಾಗುತ್ತದೆ.

'ಧರ್ಮೇ ರಹಸ್ಯುಪನಿಷತ್ ಸ್ಯಾತ್' - ಉಪನಿಷತ್ ಪದವನ್ನು ಧರ್ಮ, ರಹಸ್ಯ ಎನ್ನುವ ಅರ್ಥಗಳಲ್ಲಿ ಪ್ರಯೋಗಿಸಲ್ಪಡಲು ಯೋಗ್ಯವಾದುದು ಎಂದು ಅಮರಕೋಶ ತಿಳಿಸುತ್ತದೆ.

'ಉಪನಿಷತ್' ಶಬ್ದಕ್ಕೆ ಉಪ = ವ್ಯವಧಾನ ರಹಿತ, ನಿ = ಸಂಪೂರ್ಣವಾದ, ಷತ್ = ಜ್ಞಾನ ಎಂಬರ್ಥವೂ ಇದೆ. ಅಂದರೆ ವ್ಯವಧಿ ರಹಿತವಾದ ಸಂಪೂರ್ಣ ಜ್ಞಾನ ಎನ್ನುವ ಇನ್ನೊಂದು ಅರ್ಥವೂ ಇದೆ. ಉಪನಿಷತ್ತುಗಳಲ್ಲಿರುವ ವಿಜ್ಞಾನವು ಪರಿಪೂರ್ಣವಾದುದು, ಸತ್ಯವಾದುದು ಎಂದು ಅರ್ಥೈಸದೇಕಾಗುತ್ತದೆ.

ಮಹೋನ್ನತವಾದ ಭಾರತೀಯ ತತ್ವಜ್ಞಾನವು ಉಪನಿಷತ್ತುಗಳಲ್ಲದೆ ಬೇರೆ ಯಾವುದರಲ್ಲಿಯೂ ಕಂಡುಬರುವುದಿಲ್ಲ. ಪ್ರಪಂಚದಲ್ಲಿರುವ ದಾರ್ಶನಿಕರೆಲ್ಲರಿಗೂ ಈ ಉಪನಿಷದ್ವಿಜ್ಞಾನವು ಅಮೃತತುಲ್ಯವಾದುದು. ಈ ಉಪನಿಷತ್ತುಗಳನ್ನು ಯಾರು ಎಷ್ಟೆಷ್ಟು ಅವಗಾಹನೆ ಮಾಡಿಕೊಳ್ಳಲು ಸಾಧ್ಯವೊ ಅವರು ಅಷ್ಟೇ ಆನಂದವನ್ನು ಪಡೆಯಬಲ್ಲರು.

ಆತ್ಮಕಲ್ಯಾಣ ಮಾರ್ಗದರ್ಶನವು ಸುಲಭವಾಗಿ ಲಭಿಸುವಂತಹುದಲ್ಲ. ವನಗಳಲ್ಲಾಗಲಿ, ಅರಣ್ಯ



ಗಳಲ್ಲಾಗಲಿ, ಗುರುಕುಲಗಳಲ್ಲಾಗಲಿ, ವಿದ್ಯಾಲಯಗಳಲ್ಲಾಗಲಿ ಉಪನಿಷತ್ತುಗಳನ್ನು ವಿವೇಚಿಸುವುದರಿಂದ ಮಾತ್ರವಷ್ಟೆ ಅಂತಹ ಆತ್ಮಕಲ್ಯಾಣವು ಲಭಿಸಬಲ್ಲದು. ನಾಲ್ಕು ವರ್ಣದವರು, ನಾಲ್ಕು ಆಶ್ರಮಗಳವರು ಈ ಉಪನಿಷತ್ತುಗಳಿಂದಲೇ ಐಹಿಕವಾಗಿ, ಪಾರಮಾರ್ಥಿಕವಾಗಿ ಉಪಯೋಗವನ್ನು ಹೊಂದಬಲ್ಲವರಾಗಿದ್ದಾರೆ. ಉಪನಿಷತ್ತುಗಳು ವಿಜ್ಞಾನಮಯವಾಗಿರುವುದರಿಂದಲೇ ಇವೆಲ್ಲ ಸಾಧಿಸುವುದು ಸಾಧ್ಯವಾಗುತ್ತದೆ.

ವೇದಗಳು ಅನಂತವಾದವುಗಳು. ಕಲ್ಪ ಕಲ್ಪಾಂತರಗಳಲ್ಲಿ ಈ ವೇದಗಳಿಗೆ ಶಾಖೆಗಳು ಪ್ರಾದುರ್ಭಾವವಾಗುತ್ತಲೇ ಇದ್ದವು. ಪ್ರಸ್ತುತ ಮನ್ವಂತರದಲ್ಲಿ ವೇದಗಳಿಗೆ ೧೧೮೦ ಶಾಖೆಗಳಿದ್ದಂತೆ ತಿಳಿದುಬರುತ್ತದೆ. ಪ್ರತಿ ವೇದಶಾಖೆಗೆ ಸಂಹಿತೆ (ಮಂತ್ರ), ಬ್ರಾಹ್ಮಣ ಹಾಗೂ ಉಪನಿಷತ್ತುಗಳು ಎಂಬವುಗಳು ಇದ್ದವು. ಈ ರೀತಿಯಲ್ಲಿ ೧೧೮೦ ಮಂತ್ರ ಭಾಗಗಳಿಗೆ ೧೧೮೦ ಉಪನಿಷತ್ತುಗಳು ಇರಬೇಕಾಗಿತ್ತು. ಆದರೆ ಇಂದು ಈ ಉಪನಿಷದ್ವಾಙ್ಮಯದಲ್ಲಿ ಬಹಳಷ್ಟು ಲುಪ್ತವಾಗಿರುವುದು ದುಃಖಕರವಾದ ವಿಚಾರ. ಹೋದದ್ದು ಹೋಗಿ, ಈಗ ಉಳಿದಿರುವುದು ಅಷ್ಟೋತ್ತರ ಶತ (೧೦೮) ಉಪನಿಷತ್ತುಗಳು ಮಾತ್ರವೇನೆ! ಇವಿಷ್ಟೂ ಬಹಳಷ್ಟೂ ಪ್ರಖ್ಯಾತಿ ಹೊಂದಿ, ಸಾಧಕರಿಗೆ ಹಾಗೂ ಆಸ್ತಿಕರಿಗೆ ಆಮುಷ್ಮಿಕ ಫಲಗಳನ್ನು ಪ್ರಸಾದಿಸುತ್ತಿವೆ.

[ಆದರೆ ಇತ್ತೀಚೆಗೆ ೨೨೦ ಉಪನಿಷತ್ತುಗಳು ಇವೆ ಎಂದು ಸಂಶೋಧನೆಗಳಿಂದ ತಿಳಿದು ಬಂದಿದೆ.]

ಅಂತಹವುಗಳಲ್ಲಿ ೧) ಈಶ, ೨) ಕೇನ, ೩) ಕಠ, ೪) ಪ್ರಶ್ನ, ೫) ಮುಂಡಕ, ೬) ಮಾಂಡೂಕ್ಯ, ೭) ತೈತ್ತರೀಯ, ೮) ಐತ್ತರೇಯ, ೯) ಛಾಂದೋಗ್ಯ, ೧೦) ಶ್ವೇತಾಶ್ವತಕ - ಎನ್ನುವ ಹತ್ತು ಉಪನಿಷತ್ತುಗಳು ಪ್ರಧಾನವಾದವುಗಳಾಗಿವೆ.

ಉಪನಿಷತ್ತುಗಳಲ್ಲಿ - ಸದ್ವಿದ್ಯ, ಅಂತರಾದಿತ್ಯವಿದ್ಯ, ಆಕಾಶವಿದ್ಯ, ಪ್ರಾಣವಿದ್ಯ, ಜ್ಯೋತಿರ್ವಿದ್ಯ, ಇಂದ್ರಪ್ರಾಣವಿದ್ಯ, ಶಾಂಡಿಲ್ಯವಿದ್ಯ, ಉಪಕೋಸಲವಿದ್ಯ, ವೈಶ್ವಾನರವಿದ್ಯ, ಭೂಮ್ಯವಿದ್ಯ, ಆನಂದವಿದ್ಯ, ನಚಿಕೇತನ ವಿದ್ಯ, ಅಂತರ್ಯಾಮಿ ವಿದ್ಯ, ಅಕ್ಷರ ವಿದ್ಯ, ಗಾರ್ಗ್ಯಕ್ಷರವಿದ್ಯ, ಅಕ್ಷಿಸ್ಯಾಹಿನ್ನಾಯಕವಿದ್ಯ, ಆದಿತ್ಯ ಸ್ಥಾಪನ್ನಾಯಕ ವಿದ್ಯ, ಪಂಚಾಗ್ನಿವಿದ್ಯ, ಮೈತ್ರೇಯಿ ವಿದ್ಯ, ಚಾಲಾಕಿವಿದ್ಯ, ಸಂವರ್ಗವಿದ್ಯ, ದೇವೇಪಾಸ್ಯ ಜ್ಯೋತಿ, ಅಂಗುಷ್ಠ ಪ್ರಮಿತ ವಿದ್ಯ, ದಹರ ವಿದ್ಯ, ಪ್ರಣವ ವಿದ್ಯ, ಪುರುಷ ವಿದ್ಯ, ಉಶಸ್ತಿರ ಖಗೋಳವಿದ್ಯ, ವ್ಯಾಹೃತಿವಿದ್ಯ, ಈಶಾವಾಸ್ಯ ವಿದ್ಯ

ಉತ್ತರ ಖಗೋಳವಿದ್ಯ ವ್ಯಾಹೃತಿವಿದ್ಯ ಈಶಾವಾಸ್ಯ ವಿದ್ಯ/ದ್ರುಹಿಣ ರುದ್ರಾದಿ ಶರೀರವಿದ್ಯ ಅಜಾ ಶರೀರ ವಿದ್ಯ ಎನ್ನುವ ವಿದ್ಯೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ.

ಶ್ರೀಮದ್ರಾಮಾನುಜರು ಮೇಲೆ ತಿಳಿಸಿದ ಹತ್ತು ಉಪನಿಷತ್ತುಗಳೊಂದಿಗೆ ಮಹೋಪನಿಷತ್ತು, ಸುಬಾಲೋಪನಿಷತ್ತು, ಮಂತ್ರಿಕೋಪನಿಷತ್ತುಗಳನ್ನು ಆಧಾರವಾಗಿಟ್ಟುಕೊಂಡು 'ವೇದಾರ್ಥ ಸಂಗ್ರಹ' ಎನ್ನುವ ಗ್ರಂಥವನ್ನು ರಚಿಸಿದರು. ವಿಶಿಷ್ಟಾದ್ವೈತವನ್ನೆ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲಾಗಿದೆ ಎಂಬ ಭಾವನೆಯನ್ನು ಆಚಾರ್ಯರು ಈ ಗ್ರಂಥದ ಮುಖಾಂತರ ಸ್ಪಷ್ಟೀಕರಿಸಿದ್ದಾರೆ.

ಈ ವೇದಾರ್ಥ ಸಂಗ್ರಹ ಗ್ರಂಥವು ವಿಶಿಷ್ಟಾದ್ವೈತ ತತ್ವದ ಪ್ರತಿಪಾದನೆಯಲ್ಲಿ ಪ್ರಥಮ ಹೆಜ್ಜೆಯಾದುದರಿಂದ, ಆಚಾರ್ಯ ರಾಮಾನುಜರು ರಚಿಸಿದ ಐದು ಸಿದ್ಧಾಂತ ಗ್ರಂಥಗಳಲ್ಲಿ 'ವೇದಾರ್ಥ ಸಂಗ್ರಹ'ವ ಮೊಟ್ಟಮೊದಲನೆಯದು ಎಂದು ಧಾರಾಳವಾಗಿ ಹೇಳಬಹುದು. ಉಪನಿಷತ್ಪ್ರಸ್ಥಾನದ ನಂತರ ಉಳಿದ ಪ್ರಸ್ಥಾನಗಳನ್ನು ತಮ್ಮ ಕೃತಿಗಳಲ್ಲಿ ಆಚಾರ್ಯರು ಪ್ರತಿಪಾದಿಸರು ಎನ್ನಬಹುದು.

'ವೇದಾರ್ಥ ಸಂಗ್ರಹ'ವನ್ನು ಬಿಟ್ಟರೆ ಆಚಾರ್ಯರು ಉಪನಿಷತ್ತುಗಳ ಮೇಲೆ ಸ್ವತಂತ್ರವಾಗಿ ಬೇರೆ ಯಾವ ಭಾಷ್ಯಗಳನ್ನೂ ಬರೆದಿರುವುದಿಲ್ಲ.

ಉಪನಿಷತ್ತುಗಳ ಅಭಿಪ್ರಾಯವನ್ನು ಹೀಗೆ ನಿರ್ಣಯಿಸಬೇಕು ಎಂಬುದನ್ನು ಆಚಾರ್ಯರು ಈ ಗ್ರಂಥದಲ್ಲಿ ಸ್ಪಷ್ಟವಾಗಿ ತೋರಿಸಿದ್ದಾರೆ. ಅಂತೆಯೇ ಶ್ರೀ ಭಾಷ್ಯದಲ್ಲಿ ತಮ್ಮ ಅಭಿಪ್ರಾಯಕ್ಕೆ ಸೂಕ್ತ ಉಪಪತ್ತಿಯನ್ನೂ ಕೊಟ್ಟಿರುತ್ತಾರೆ. ಅದರಿಂದ ಉಪನಿಷತ್ತುಗಳಿಗೆ ಬೇರೆಯೇ ಆದ ಭಾಷ್ಯವನ್ನು ಬರೆಯುವ ಆವಶ್ಯಕತೆಯು ಕಾಣಿಸಲಿಲ್ಲ ಎನ್ನಬೇಕಾಗುತ್ತದೆ.

ಶ್ರೀ ಭಾಷ್ಯಕೃದುಪನ್ಯಸ್ತೋ
ಯಃ ಶ್ರೀಶೈಲಪತೇಃ ಪುರಃ
ವೇದಾರ್ಥ ಸಂಗ್ರಹಸ್ತಸ್ಯ
ಕುರ್ಮಸ್ತಾತ್ಪರ್ಯ ದೀಪಿಕಾಮ್

ಎಂದು ಸುದರ್ಶನ ಸೂರಿಗಳು ತಮ್ಮ 'ತಾತ್ಪರ್ಯ ದೀಪಿಕೆ'ಯಲ್ಲಿ ತಿಳಿಸಿರುವಂತೆ, 'ಶ್ರೀ ಭಾಷ್ಯಕಾರರು ತಿರುಪತಿಯ ವೆಂಕಟೇಶ್ವರನ ಮುಂದೆ ಈ ಗ್ರಂಥವನ್ನು ನಿರೂಪಿಸಿದರೆಂದು ಹೇಳಿರುವುದರಿಂದ ಇದನ್ನು ಆಚಾರ್ಯರು ಭಗವದಾರಾಧಾನದ ರೂಪದಲ್ಲಿ ರಚಿಸಿರುತ್ತಾರೆಂದು ಹೇಳಬಹುದು.

ಉಪನಿಷದ್ವಚನಗಳು ಕೆಲವು ಜೀವಾತ್ಮ - ಪರಮಾತ್ಮರ ಭೇದಗಳನ್ನು ಪ್ರತಿಪಾದಿಸುತ್ತವೆ. ಇನ್ನು ಕೆಲವು ಅಭೇದಗಳನ್ನು ಸೂಚಿಸುತ್ತವೆ. ಈ ವಿರುದ್ಧತೆಯ ಕಾರಣದಿಂದಲೇನೇ ಆಯಾಯಾ ಮತಗಳ ಸಿದ್ಧಾಂತಗಳಲ್ಲೂ ಕೂಡ ಅಭಿಪ್ರಾಯ ಭೇದಗಳು ಏರ್ಪಟ್ಟುವು. ಅನ್ಯೋನ್ಯ ವಿರೋಧವಾಗಿ ಕಾಣುವ ವಾಕ್ಯಗಳಲ್ಲಿನ ವಿರೋಧವನ್ನು ತೆಗೆದುಹಾಕಿ ಸಮನ್ವಯವನ್ನು ಪ್ರತಿಪಾದಿಸುತ್ತಾ ಭಗವದ್ರಾಮಾನುಜರು ಅಖಿಲ ಶ್ರುತಿ ಸಮ್ಮತವಾದ ವಿಶಿಷ್ಟಾದ್ವೈತ ಮತವನ್ನು ಸ್ಥಾಪಿಸಿದರು.

## ೨. ಬ್ರಹ್ಮಸೂತ್ರಗಳು :

ಭಾರತೀಯ ದರ್ಶನ ವಾಙ್ಮಯದಲ್ಲಿ ಬ್ರಹ್ಮಸೂತ್ರಗಳಿಗೆ ಒಂದು ವೈಶಿಷ್ಟ್ಯಪೂರ್ಣ ಸ್ಥಾನವಿದೆ. ಅಲ್ಪಾಕ್ಷರಗಳಲ್ಲಿ ಅನಲ್ಪಾರ್ಥಗಳನ್ನು ಸೂಚಿಸುವ ಬ್ರಹ್ಮಸೂತ್ರಗಳು ವಿವರಣಗಳಿಲ್ಲದೆ ಅರ್ಥವಾಗುವಂತಹವುಗಳಲ್ಲ. ಈ ಸೂತ್ರಗಳಲ್ಲಿ ಗೌಪ್ಯವಾಗಿರುವ ಅರ್ಥ ಸಮುಚ್ಚಯದ ಕಾರಣ ಅವುಗಳನ್ನು ರಚಿಸಿದಾಗಿನಿಂದಲೂ ಅವುಗಳ ಅಧ್ಯಯನ, ಅಧ್ಯಾಪನ ಎನ್ನುವುಗಳೇ ಅಲ್ಲದೆ, ಅವು ಚರ್ಚೆಯ ವಿಷಯವಾಗಿಯೂ ಕೂಡ ಪ್ರಾಮುಖ್ಯತೆಯನ್ನು ಹೊಂದಿವೆ.

ಪೂರ್ವಾಚಾರ್ಯರು ಕೆಲವರು ಈ ಬ್ರಹ್ಮಸೂತ್ರಗಳ ಬಗ್ಗೆ ವೃತ್ತಿ, ವಾಕ್ಯ ವಾರ್ತಿಕ, ಭಾಷ್ಯ ಎನ್ನುವ ಹೆಸರುಗಳಲ್ಲಿ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಇವು ಇಂದಿಗೂ ಪ್ರಮುಖ ಸ್ಥಾನವನ್ನು ಅಲಂಕರಿಸಿಯೇ ಇವೆ.

ಇಷ್ಟೇ ಅಲ್ಲದೆ ಇತರೇ ಕೆಲವರು ಅವುಗಳನ್ನು ಅಧ್ಯಯನ ಮಾಡಿ, ಬ್ರಹ್ಮಸೂತ್ರಗಳ ಬಗ್ಗೆ ವಿವರಗಳನ್ನು ನೀಡಿರುವುದೇ ಅಲ್ಲದೆ ಅನೇಕ ಗ್ರಂಥಗಳನ್ನೂ ರಚಿಸಿದ್ದಾರೆ.

ಈ ರೀತಿಯಲ್ಲಿ ಭಾರತೀಯ ದರ್ಶನ ವಾಙ್ಮಯದಲ್ಲಿ ಅಂದಿನಿಂದ ಇಂದಿನವರೆಗೂ ಮಹಾಮಹನೀಯರನೇಕರು ತಮ್ಮತಮ್ಮ ಪ್ರತಿಭಾವ್ಯತ್ಪತ್ತಿಗಳನ್ನು ಬ್ರಹ್ಮಸೂತ್ರಗಳ ವ್ಯಾಖ್ಯಾನಗಳನ್ನು ರಚಿಸುವುದರಲ್ಲಿ ಪ್ರದರ್ಶಿಸುತ್ತಲೇ ಇದ್ದಾರೆ.

ಬಾದರಾಯಣನೆಂದು ಕರೆಯಲ್ಪಡುವ ವ್ಯಾಸಭಗವಾನನು ಈ ಬ್ರಹ್ಮಸೂತ್ರಗಳನ್ನು ರಚಿಸಿದ್ದಾನೆ. ಆತನು ವೇದವಿದನಾಗಿದ್ದುದೇ ಅಲ್ಲದೆ, ಆ ವೇದಗಳಲ್ಲಿ ಅಂತರ್ಗತವಾಗಿರುವ ತಾತ್ವಿಕ ವಿಷಯಗಳನ್ನು ಕೂಡ ಸೂತ್ರಗಳ ರೂಪದಲ್ಲಿ ರಚಿಸಿದ್ದಾನೆ. ಈ ಸೂತ್ರಗಳು ವ್ಯಾಸನಿಂದ ರಚಿತವಾದವುಗಳಾದುದರಿಂದ, ಅವುಗಳಿಗೆ 'ವ್ಯಾಸ ಸೂತ್ರಗಳು' ಎಂದು ಕರೆಯುವರು. ನಾಲ್ಕು ಅಧ್ಯಾಯಗಳಲ್ಲಿ, ೧೫೫ ಸೂತ್ರಗಳ ಮುಖಾಂತರ ರಚಿಸಲ್ಪಟ್ಟಿರುವ ಈ ಬ್ರಹ್ಮಸೂತ್ರ ಗ್ರಂಥಕ್ಕೆ ಕೆಲವು ದಾರ್ಶನಿಕರು ಭಾಷ್ಯಗಳನ್ನು ರಚಿಸಿದ್ದಾರೆ.

ಭಾರತೀಯ ವೇದಾಂತ ಪ್ರತಿಕ್ರಿಯೆಯಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎನ್ನುವ ಪ್ರಧಾನವಾದ ಮೂರು ಶಾಖೆಗಳಿಗೆ ಸೇರಿದ ಆಚಾರ್ಯರು ತಮ್ಮ ತಮ್ಮ ಮತಗಳೊಂದಿಗೆ ಸಮನ್ವಯಿಸುತ್ತಾ ಬ್ರಹ್ಮಸೂತ್ರಗಳಿಗೆ ವಿಪುಲವಾದ ಭಾಷ್ಯಗಳನ್ನು ರಚಿಸಿದ್ದಾರೆ. ಇತರರೂ ರಚಿಸಿದ್ದಾರೆ.

ಆ ವಿವರಗಳು ಈ ರೀತಿಯಲ್ಲಿ ಪ್ರಖ್ಯಾತಿಗೊಂಡಿವೆ ಎಂದು ಹೇಳಬಹುದು.

| ಭಾಷ್ಯಕಾರರು | ಭಾಷ್ಯ | ಸಿದ್ಧಾಂತ |
|---|---|---|
| 1. ಶಂಕರಾಚಾರ್ಯರು | ಶಂಕರ ಭಾಷ್ಯ | ಅದ್ವೈತ |
| 2. ಭಾಸ್ಕರಾಚಾರ್ಯರು | ಭಾಸ್ಕರ ಭಾಷ್ಯ | ಔಪಾಧಿಕ ಭೇದಾಭೇದ |
| 3. ರಾಮಾನುಜಾಚಾರ್ಯರು | ಶ್ರೀ ಭಾಷ್ಯ | ವಿಶಿಷ್ಟಾದ್ವೈತ |
| 4. ನಿಂಬಾರ್ಕಾಚಾರ್ಯರು | ವೇದಾಂತ ಪಾರಿಜಾತ ಸೌರಕ್ಷ | ಸ್ವಾಭಾವಿಕ ಭೇದಾಭೇದ |
| 5. ಮಧ್ವಾಚಾರ್ಯರು | ಪೂರ್ಣಪ್ರಜ್ಞ ಭಾಷ್ಯ | ದ್ವೈತ |
| 6. ಶ್ರೀಕಂಠಾಚಾರ್ಯರು | ಶೈವ ಭಾಷ್ಯ | ಶೈವ ವಿಶಿಷ್ಟಾದ್ವೈತ |
| 7. ಶ್ರೀಪತಿ (ಆಚಾರ್ಯರು) | ಶ್ರೀಕರ ಭಾಷ್ಯ | ವೀರಶೈವವಿಶಿಷ್ಟಾದ್ವೈತ |
| 8. ವಲ್ಲಭಾಚಾರ್ಯರು | ಅಣು ಭಾಷ್ಯ | ಶುದ್ಧಾದ್ವೈತ |
| 9. ವಿಜ್ಞಾನ ಭಿಕ್ಷು | ವಿಜ್ಞಾನಾಮೃತ ಭಾಷ್ಯ | ಅವಿಭಾಗಾದ್ವೈತ |
| 10. ಬಲದೇವರು | ಗೋವಿಂದ ಭಾಷ್ಯ | ಅಚಿಂತ್ಯ ಭೇದಾ - ಭೇದ |

ಆಚಾರ್ಯ ರಾಮಾನುಜರು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನವನ್ನು ಬರೆಯುತ್ತಾ ಅದರಲ್ಲಿ,

'ಭಗವದ್ಬೋಧಾಯನ ಕೃತಾಂ
ವಿಸ್ತೀರ್ಣಾಂಬ್ರಹ್ಮಸೂತ್ರ ವೃತ್ತಿಂ
ಪೂರ್ವಾಚಾರ್ಯಾಸ್ಸಂಕ್ಷಿಪು,
ತನ್ಮತಾನುಸಾರೇಣ ಸೂತ್ರಾಕ್ಷರಾಣಿ
ವ್ಯಾಖ್ಯಾಸ್ಯಂತೇ'

'ಬೋಧಾಯನ ಮಹರ್ಷಿಯಿಂದ ರಚಿಸಲ್ಪಟ್ಟಿರುವ ಬ್ರಹ್ಮಸೂತ್ರ ವೃತ್ತಿಯನ್ನು ಪೂರ್ವಾಚಾರ್ಯರು ಸಂಕ್ಷೇಪಿಸಲು ತದನುಸಾರ ಬ್ರಹ್ಮಸೂತ್ರಗಳು ವ್ಯಾಖ್ಯಾನಿಸಲ್ಪಟ್ಟಿವೆ.'

ಎಂದು ಉದ್ಘಾಟಿಸಿದ್ದಾರೆ.

ಅದರಿಂದ ಶ್ರೀ ಭಾಷ್ಯ ರಚನೆಗೆ ಪ್ರಧಾನಾಧಾರವು ಬೋಧಾಯನ ವೃತ್ತಿಯೆಂಬುದೂ, ಶ್ರೀ ಭಾಷ್ಯದಲ್ಲಿ ನಿರ್ದೇಶಿಸಲ್ಪಟ್ಟಿರುವ ಸಿದ್ಧಾಂತವು ಪೂರ್ವಾಚಾರ್ಯರಿಂದ ಅನುಗೃಹೀತವಾದುದೆಂದು ಇದರಿಂದ ಸ್ಪಷ್ಟವಾಗುತ್ತದೆ.

ಈ ಶ್ರೀಭಾಷ್ಯವನ್ನು ಆಚಾರ್ಯ ರಾಮಾನುಜರು ಕ್ರಿ.ಶ. ೧೧೫೫-೬೦ ರ ನಡುವೆ ರಚಿಸಿದ್ದಿರಬಹುದೆಂದು ಇತಿಹಾಸದ ಆಧಾರಗಳಿಂದ ತಿಳಿದು ಬರುತ್ತದೆ. ಈ ರಾಮಾನುಜ ಭಾಷ್ಯವು ಉಳಿದೆಲ್ಲ ಭಾಷ್ಯಗಳಲ್ಲಿಯೂ ಬಹಳ ಪ್ರಮುಖವಾದುದು ಎಂದು ಭಾವಿಸಲಾಗಿದೆ. ಇದರಲ್ಲಿನ ಸೂತ್ರಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು ಸೂತ್ರಾನುಕೂಲವಾಗಿರುವುದೇ ಅಲ್ಲದೆ, ಈ ಭಾಷ್ಯದ ರಚನಾ ವಿಧಾನದಲ್ಲಿಯೂ ಕೂಡ ಸರಳತೆ, ಗಂಭೀರತೆ, ಪ್ರೌಢತೆ, ಸೋಪಪತ್ತಿಕತೆ, ಅರ್ಥಗೌರವ, ಸೂಕ್ಷ್ಮವಿಚಾರ, ಭಾಷಾ ಸೌಷ್ಟವ - ಇತ್ಯಾದಿಗಳ ಅಪೂರ್ವ ಸಮನ್ವಯವಾಗಿದೆ.

ಇಂತಹ ಸಮನ್ವಯ ವಿಶೇಷತೆಯ ಕಾರಣದಿಂದಲೇ, ಆಚಾರ್ಯ ರಾಮಾನುಜರ ಬ್ರಹ್ಮಸೂತ್ರ ಭಾಷ್ಯವು ಕಾಶ್ಮೀರ ವಿದ್ಯಾಪೀಠದ ಶಾರದಾದೇವಿಯಿಂದ ಸ್ವೀಕರಿಸಲ್ಪಟ್ಟು 'ಶ್ರೀ ಭಾಷ್ಯ'ಎಂಬ ಹೆಸರು ಪಡೆದು ಪ್ರಖ್ಯಾತವಾಗಿದೆ.

ಬ್ರಹ್ಮಸೂತ್ರಗಳು ಪ್ರತಿಪಾದಿಸಿರುವ ಸಿದ್ಧಾಂತವು ವಿಶಿಷ್ಟಾದ್ವೈತವೇ ಎಂಬುದನ್ನು ನಿರೂಪಿಸುತ್ತಾ, ಆ ಸೂತ್ರಗಳಿಗೆ ವಿವರಗಳ ರೂಪದಲ್ಲಿ 'ವೇದಾಂತಸಾರ, ವೇದಾಂತ ದೀಪ, ಶ್ರೀಭಾಷ್ಯ' ಎನ್ನುವ ಮೂರು ಗ್ರಂಥಗಳನ್ನು ಭಗವದ್ರಾಮಾನುಜರು ರಚಿಸಿದರು.

ಈ ಮೂರರಲ್ಲಿ ಮೊದಲನೆಯ ಗ್ರಂಥವು ಸಂಗ್ರಹ ರೂಪವಾಗಿಯೂ, ಮೂರನೆಯದು ವಿಸ್ತೃತವಾಗಿಯೂ ಸೂತ್ರಗಳನ್ನು ವಿವರಿಸಲಾಗಿದೆ. ವೇದಾಂತದೀಪದಲ್ಲಿರುವ ವಿವರಣೆಗಳು ಅತಿ ವಿಸ್ತೃತವೂ ಅಲ್ಲದೆ, ಅತಿ ಸಂಗ್ರಹವೂ ಅಲ್ಲದೆ ಮಧ್ಯಮ ವಿಧಾನವನ್ನು ಅನುಸರಿಸಿದೆ.

## ೩. ಭಗವದ್ಗೀತೆ :

ಭಗವದ್ಗೀತೆಯು ಮುಮುಕ್ಷುಗಳಿಗೆ ಜ್ಞಾನೋದಯವನ್ನು ಉಂಟುಮಾಡುತ್ತದೆ. ಪಂಚಮ ವೇದ ಎಂದು ಕರೆಯಲ್ಪಡುವ ಮಹಾಭಾರತದಲ್ಲಿನ ಭೀಷ್ಮಪರ್ವದಲ್ಲಿನ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಇದು ಕಂಡು ಬರುತ್ತದೆ. ಅಷ್ಟಾದಶ ಪುರಾಣಗಳನ್ನು ರಚಿಸಿ ಪ್ರಖ್ಯಾತಿ ಪಡೆದ ಭಗವಾನ್ ವೇದವ್ಯಾಸರು ಮಹಾಭಾರತೇತಿ ಹಾಸಾಂತಾರ್ಗತವಾಗಿರುವ ಈ ಭಗವದ್ಗೀತೆಯನ್ನು ರಚಿಸಿದ್ದಾರೆ.

ಸಪ್ತರ್ಷಿಗಳಲ್ಲಿ ವಸಿಷ್ಠರೂ ಒಬ್ಬರು. ಇವರ ಮಗನೇ ಶಕ್ತಿ. ಈ ಶಕ್ತಿಯ ಮಗನೇ ಪರಾಶರ. ಈ ಪರಾಶರರ ಮಗನೇ ವ್ಯಾಸ.

ಭಗವಾನ್ ವಿಷ್ಣುವು ವ್ಯಾಸರೆನ್ನುವ ಹೆಸರಿನಿಂದ ಅವತರಿಸಿದನು. ಗೀತೆಯನ್ನು ಉಪದೇಶಿಸಿದ ಕೃಷ್ಣನೂ ವಿಷ್ಣುವೆ. ಅಂತಹ ಕೃಷ್ಣನ ವದನಾರವಿಂದದಿಂದ ಹೊರಬಂದ ಭಗವದ್ಗೀತೆಯನ್ನು ಮಹಾಭಾರತದಲ್ಲಿ ಸೇರಿಸಿ, ರಚಿಸಿದ ವ್ಯಾಸರೂ ಕೂಡ ವಿಷ್ಣುವೆ. ಅದರಿಂದ ವಿಷ್ಣು ಭಗವಾನನ ಮಹಿಮೆಯನ್ನು ಬೆಳಕಿಗೆ ತರಲು ಸ್ವತಃ ಆತನೇ ಅವತರಿಸಿದನು.

ಉಪನಿಷತ್ತುಗಳೆಲ್ಲವನ್ನೂ ಒಂದು ಗೋವಿನಂತೆಯೂ, ಕೃಷ್ಣನನ್ನು ಗೋಪಾಲನಂತೆಯೂ, ಅರ್ಜುನನನ್ನು ಮಗನಂತೆಯೂ, ಈ ಪುತ್ರನ ಅಗತ್ಯಕ್ಕಾಗಿರುವ ಕ್ಷೀರವೇ ಗೀತಾಮೃತವೆಂದು ಅನುಗ್ರಹಿಸಿ, ಆ ಅಮೃತವನ್ನು ಆಸ್ವಾದಿಸಿ, ಆನಂದಸ್ವರೂಪನಾದ ಭಗವಂತನ ಅನುಗ್ರಹವನ್ನು ಹೊಂದುವುದೇ ಮಾನವ ಜೀವನದ ಪರಮಾರ್ಥವಾಗಿದೆ.

ಭಗವದ್ಗೀತೆಯು ೧೮ ಅಧ್ಯಾಯಗಳಿಂದ ಕೂಡಿದ್ದು ೭೦೦ ಶ್ಲೋಕಗಳಿಂದ ಕೂಡಿದ್ದಾಗಿದೆ. ಈ ಪೂಜನೀಯ ಕೃತಿಯು ಪ್ರಪಂಚದ ಎಲ್ಲ ಭಾಷೆಗಳಿಗೂ ಅನುವಾದವಾಗಿ, ವಿಶ್ವವಿಖ್ಯಾತಿಯನ್ನು ಪಡೆದಿದೆ.

ಸ್ವಧರ್ಮ ಜ್ಞಾನ ವೈರಾಗ್ಯ
ಸಾಧ್ಯ ಭಕ್ತ್ಯೇಕ ಗೋಚರಃ
ನಾರಾಯಣ ಪರಂಬ್ರಹ್ಮ
ಗೀತಾಶಾಸ್ತ್ರೇ ಸಮೀರತಃ

ವರ್ಣಾಶ್ರಮಧರ್ಮದ ನಿರ್ವಹಣೆಯಿಂದ, ಜ್ಞಾನದಿಂದ, ಭಕ್ತಿಯಿಂದ, ವೈರಾಗ್ಯದ ಮುಖಾಂತರ ಗೋಚರವಾಗುವ ಶ್ರೀಮನ್ನಾರಾಯಣನೆ ಗೀತಾಶಾಸ್ತ್ರವನ್ನು ನಿರ್ದೇಶಿಸಿದ್ದಾನೆಂದು ಶ್ರೀ ಯಾಮುನಾಚಾರ್ಯರು ವಿವರಿಸಿದ್ದಾರೆ.

ಭಗವದ್ರಾಮಾನುಜರು ಈ ಭಗವದ್ಗೀತೆಗೆ ಭಾಷ್ಯವನ್ನು ರಚಿಸುತ್ತಾ, ಆರಂಭದ ಅವತರಣಿಕೆಯಲ್ಲಿ

'ಶ್ರಿಯಃಪತಿಃ ನಿಖಿಲ ಹೇಯ
ಪ್ರತ್ಯನೀಕ ಕಲ್ಯಾಣೈಕತಾನಃ,
ಸ್ವೇತರ ಸಮಸ್ತ ವಸ್ತು
ವಿಲಕ್ಷಣಾನನ್ತ ಜ್ಞಾನಾನಂದೈಕ ಸ್ವರೂಪಃ......
ಪರಮ ಪುರುಷಾರ್ಥ ಲಕ್ಷಣ
ಮೋಕ್ಷ ಸಾಧನತಯಾ ವೇದಾನ್ತೋದಿತಂ
ಸ್ವವಿಷಯಂ ಜ್ಞಾನ ಕರ್ಮಾನು ಗೃಹೀತಂ
ಭಕ್ತಿಯೋಗ ಮವತಾರಯಾ ಮಾಸ'

ಎಂದು ಭಗವದ್ಗೀತೆಯಲ್ಲಿ ಜ್ಞಾನ ಕರ್ಮಾನುಗೃಹೀತವಾದ ಭಕ್ತಿಯೋಗವನ್ನು, ಅದಕ್ಕಿಂತಲೂ ವಿಶೇಷವಾದ ಫಲದಾಯಕವನ್ನೂ, ಮೋಕ್ಷೋಪಾಯವಾದ ಪ್ರಪತ್ತಿಯೋಗವನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದನೆಂದೂ, ಅಂತಹ ಶ್ರೀಕೃಷ್ಣೋಪದೇಶದಲ್ಲಿ ವಿಶಿಷ್ಟಾದ್ವೈತವೇ ಪ್ರತಿಪಾದಿಸಲ್ಪಟ್ಟಿದೆಯೆಂದೂ ಭಗವದ್ರಾಮಾನುಜರು ತಮ್ಮ ಗೀತಾಭಾಷ್ಯದಲ್ಲಿ ಪ್ರಮಾಣೋಕ್ತಿಗಳಿಂದ ನಿರೂಪಿಸಿದ್ದಾರೆ.

ಈ ರೀತಿಯಲ್ಲಿ ಉಪನಿಷತ್ತುಗಳು, ಬ್ರಹ್ಮಸೂತ್ರಗಳು, ಭಗವದ್ಗೀತೆ - ಎನ್ನುವವುಗಳು 'ಪ್ರಸ್ಥಾನತ್ರಯ' ಎಂದು ಪ್ರಖ್ಯಾತವಾಗಿ, ಮುಕ್ತಿಮಾರ್ಗೋಪದೇಶಕಗಳಾಗಿ ಜನಮನದಲ್ಲಿ ನೆಲೆಸಿವೆ.

ಶ್ರೀ ಭಾಷ್ಯಕಾರೋ ಜಯತು
ರಾಮಾನುಜ ಜಗದ್ಗುರುಃ
ಮುಮುಕ್ಷೂಣಾಂ ಚ ಸರ್ವೇಷಾಂ
ಶ್ರೀಮದಷ್ಟಾಕ್ಷರಪ್ರದಕಿ

(ಆಧಾರಗಳಿಂದ)

## ಪ್ರಕಟನೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

ತಿ. ತಿ. ದೇ.

ಈಶ ನಿನ್ನ ಚರಣ ಭಜನೆ
ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶ ಕೇಶವ
ಶರಣುಹೊಕ್ಕೆನಯ್ಯ ಎನ್ನ
ಮರಣ ಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ ನಾರಾಯಣ

--ಕನಕದಾಸರು.

# ತಿರುಪ್ಪಾವೈ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್ಯ.

ಪಾಲ್ಗಡಲು ಭಾಂಡಗಳ ಮೇಲುಕ್ಕಿ ಹರಿವಂತೆ
ಎಡೆಬಿಡದೆ ಪಾಲ್ಗರೆವ ಬಿಣ್ಮೊಲೆಯ ಧೇನುಗಳ
ಪಾಲಿಸುವ ನಂದಗೋಪನ ಕುವರ, ಭಕ್ತಜನ
ಮಂದಾರ, ಧರೆಗಿಳಿದ ಪೊಂಜೊಡರೆ ಪರಾತ್ಪರ,
ನಿದ್ರೆಯನು ತೊರೆದೇಳು; ನಿಮ್ಮಡಿಯ ನಗಲಿರದೆ
ಸಲೆಸೋತ ವೈರಿಗಳು ಕಾದಿಹರು ಬಾಗಿಲೊಳು;
ನಿಜಪಾದ ಪದುಮಗಳ ಸೇವಿಸಲು ಸಾರ್ತಂದು
ಮಂಗಳವ ಪಾಡುಪೊಡೆ, ವ್ರತ ಫಲವು ಸಿದ್ಧಿಪುದು
ನಮಗಿಂದು ||೨೧||



ಪರಮ ಔದಾರ್ಯಕ್ಕೆ ಹೆಸರಾದವನು ನಂದಗೋಪ. ಅವನ ಗೋವ್ರಜವೋ ತಮ್ಮ ಸ್ವಾಮಿಯಂತೆಯೇ ಧಾರಾಳಿಗಳು. ಅವುಗಳ ಕೆಚ್ಚಲಿಗೆ ಕೈಯಿಟ್ಟು ಯಾರೂ ಹಾಲು ಕರೆಯಲೇ ದೇಕಾಗಿಲ್ಲ. ಗೋಶಾಲೆಯಲ್ಲಿಟ್ಟ ಭಾಂಡಗಳೆಲ್ಲ ಉಕ್ಕಿಹರಿಯುವಂತೆ ಗೋವುಗಳು ತಾವೇ ಹಾಲಿನಿಂದ ತುಂಬಿಸಿ ಬಿಡುತ್ತವೆ. ಇಂಥ ಗೋ ಸಂಪತ್ತುಳ್ಳ ನಂದಗೋಪನ ಸುಪುತ್ರ ನೀನೆಂದಮೇಲೆ ನಿನ್ನ ಔದಾರ್ಯಕ್ಕೆ ಇತಿಮಿತಿಗಳುಂಟೆ ಶ್ರೀಕೃಷ್ಣ? ಆಶ್ರಿತ ವಾತ್ಸಲ್ಯಸಿಂಧು, ಸರ್ವಸ್ವಾತ್‌ಪರ; ಸಾಧು ಸಂತರನ್ನು ರಕ್ಷಿಸಲೋಸುಗವೇ ಧರೆಗಿಳಿದು ಬಂದು ಸೂರ್ಯಾಗ್ನಿಗಳಿಗೂ ನಿಜತೇಜವನ್ನು ದಯೆಪಾಲಿಸುತ್ತಿರುವ ಪರಂಜ್ಯೋತಿ ಸ್ವರೂಪ, ಭಕ್ತಜನಮಂದಾರ, ಇಕೋ ನಿನಗೆ ಸುಪ್ರಭಾತ, ತಮ್ಮ ಹಮ್ಮು ಬಿಮ್ಮುಗಳನ್ನುಳಿದು ಸೋತು ಸೊಪ್ಪಲಾಗಿ ನಿನ್ನನ್ನು ಅಗಲಿರಲಾರದೆ ಶರಣಾಗತರಾಗಿ ಬಂದಿದ್ದಾರೆ ನಿನ್ನ ವೈರಿಗಳು. "ತಸ್ಯ ನಾಮ ಮಹದ್ಯಶಃ" ಎಂಬ ಉಪನಿಷದ್ ವಾಕ್ಯದಂತೆ ನಿನ್ನ ನಾಮಸಂಕೀರ್ತನೆಗಾಗಿ ನಾವೂ ಅವರೊಡನೆ ನಿನ್ನ ಅನಂತಕಲ್ಯಾಣಗುಣಗಳಿಗೆ ಮನಸೊತು ಬಂದಿದ್ದೇವೆ, ನಿನ್ನ ಮಂದಿರದ ಬಾಗಿಲಿಗೆ. ನಿನ್ನ ದರ್ಶನಸೌಭಾಗ್ಯವನ್ನು ಅನುಗ್ರಹಿಸಿದರೆ ನಮ್ಮ ಈ ವ್ರತವು ಫಲಪ್ರದವಾಗುತ್ತದೆ" ಎಂದು ಶ್ರೀ ಆಂಡಾಳ್ ಈ ಪದ್ಯವನ್ನು ಹಾಡಿದ್ದಾಳೆ.

ನಿಜಾಹಂಕಾರವಳಿದವನೀಶರ್ಕೈತಂದು
ನಿಮ್ಮಡಿಯ ಮಂಚದಡಿಯಂಚಿನೊಳು ನಿಂದಂತೆ
ಮುಡಿಚಾಚಿ ಬಂದಿಹೆವ್ಯ ಕಿರಿಗೆಜ್ಜೆ ಬಾಯ್ದೆರೆದು
ಉಲಿವಂತೆ, ಅರೆಬಿರಿದ ಕೆಂದಾವರೆ ವೊಲೆಸೆವ
ಕಣ್ತೆರೆದು ರವಿಚಂದ್ರ ರೊಡಮೂಡಿ ಬಂದಂತೆ
ಕಣ್ಮಲರ ಕಾಂತಿಯೊಂದಿನಿತು ಸೋಂಕಲಾಗಳೆ
ಸಂಚಿಸಿದ ಪಾಪ ಕರ್ಮಗಳೆಲ್ಲ ನಶಿಸಲ್ಕೆ
ಕೈಗೊಂಡ ವ್ರತಫಲವು ನಿರುತದಿಂ ನಿಲುಕುವುದು
ನಮಗಿಂದು ||೨೨||



ರಮಣೀಯವಾದ ಸಪ್ತದ್ವೀಪಗಳುಳ್ಳ ಪೊಡವಿಯನ್ನಾಳುವ ರಾಜಾಧಿರಾಜರು ತಮ್ಮ ದುರ್ವಾರ ಗರ್ವವನ್ನು ದೂರಮಾಡಿ ಬಂದಿದ್ದಾರೆ. ನಿಜಾಭಿಮಾನ ಭಂಜಿತರಾದ ರಾಜರಂತೆ ನಾವೂ ಬಂದಿದ್ದೇವೆ. ಸ್ವಸ್ವರೂಪಜ್ಞಾನ ಪಡೆದು ನಿಮ್ಮಡಿಯ ಮಂಚದ ಅಂಚಿನಲ್ಲಿ ಅವರಂತೆ ನಾವು ಮುಡಿಚಾಚಿನಿಂತಿದ್ದೇವೆ. ಕಿರುಗೆಜ್ಜೆಯಂತೆ ಬಾಯ್‌ತೆರೆದು, ಅರೆಬಿರಿದ ಕೆಂದಾವರೆಯಂತೆ ಕಣ್ತೆರೆದು ನಮ್ಮನ್ನು ನೋಡಯ್ಯ, ಚಂದ್ರಸೂರ್ಯರುದಿಸಿ ಬಂದಂತೆ ನಮ್ಮ ಮೇಲೆ ನಿನ್ನ ಕಟಾಕ್ಷ ವೀಕ್ಷಣೆಯಾ

ಗಬೇಕು. ಅದನ್ನೇ ಅನನ್ಯಾರ್ಹ ಶೇಷಿತ್ವವನ್ನು ಬೇಡುತ್ತಿರುವ ನಾವು ನಿರೀಕ್ಷಿಸುತ್ತಿದ್ದೇವೆ. ರವಿಯಂತೆ ಬೆಳಗುವ ನಿನ್ನ ಒಂದು ಕಣ್ಣಿನ ಕಾಂತಿಯಿಂದ ನಮ್ಮ ಪಾಪರಾಶಿಯೆಲ್ಲ ಸುಟ್ಟು ಭಸ್ಮವಾದರೆ, ಚಂದ್ರನಿಗೆ ಸಮಾನವಾದ ನಿನ್ನ ಇನ್ನೊಂದು ಕಣ್ಣಿನ ಬೆಳಕಿನಿಂದ ಆಹ್ಲಾದ ವುಂಟಾಗುತ್ತದೆ. ಹಾಗಾದರೆ ಮಾತ್ರ ನಮ್ಮ ಅದ್ವಿತೀಯವಾದ ಈ ವ್ರತವು ಸಿದ್ಧಿಸುತ್ತದೆ." ಎಂದು ಗೋದಾದೇವಿ ಭಗವಂತನ ಕಟಾಕ್ಷ ವೀಕ್ಷಣೆಗಾಗಿ ಈ ಪದ್ಯದಲ್ಲಿ ಪ್ರಾರ್ಥಿಸುತ್ತಿದ್ದಾಳೆ.

ಇಲ್ಲಿ ಶ್ರೀಮದ್ವೇದಾಂತದೇಶಿಕರ ವೈರಾಗ್ಯ ಪಂಚಕದ "ಕ್ಷೋಣೀ ಕೋಣ ಶತಾಂಶಪಾಲನ - ಕಲಾ ದುರ್ವಾರ ಗರ್ವಾನಲ - ಕ್ಷುಭ್ಯತ್ ಕ್ಷುದ್ರ ನರೇಂದ್ರ" ಎಂಬ ಶ್ಲೋಕ ಭಾಗವನ್ನೂ, ನಮ್ಮಾಳ್ವಾರರ ತಿರುವಾಯ್ ಮೊಳಿಯ - "ಒರುನಾಯಹ ಮಾಯೋಡ ಉಲಕುಡ ನಾಂಡವರ್" ಎಂಬ ಪಾಶುರವನ್ನೂ--

ಆನಾದ ಶೆಲ್ವತ್ತರಂಬಯರ್‌ಹಳ್ ತಜ್ಗೂಳ್
ವಾನಾಳಾಮ್ ಶೆಲ್ವಮುಮ್ ಮಣ್ಣರಶುಮ್
ಯಾನ್ ವೇಂಡೇನ್"

ಎಂಬ ಶ್ರೀಕುಲಶೇಖರ ಆಳ್ವಾರ್‌ರವರ ಪೆರುಮಾಳ್ ತಿರುಮೊಳಿಯ ಪಾಶುರವನ್ನೂ ಹಾಗೂ--

ಮುಕುಂದಮಾಲೆಯ "ರಮ್ಯಾರಾಮಾಮ್ಯದುತನುಲತ ನಂದನೇ ನಾಪಿರಂತುಂ" ಎಂಬ ಶ್ಲೋಕ ಭಾಗವನ್ನೂ ಜ್ಞಾಪಿಸಿಕೊಳ್ಳಬಹುದು.

ಕಾರೊಡಲ ಗಿರಿಗುಹಾಗರ್ಭದಿಂ ತಿಳಿದೆದ್ದು
ಮೈಮುರಿದು ನಿಮಿರೆದ್ದ ಕೇಸರಂಗಳನೊದರಿ,
ಕಣ್ಗಳಿಂ ಕಿಡಿಸೂಸಿ ಠೀವಿಯಿಂದಡಿಯಿಡುತ
ಪೊರಮಡುವ ಕಂಠೀರವನ ಪೊಲತಸೀಗುಚ್ಛ
ಸಚ್ಛಾಯ ಕಾಯದಿಂ ಕಂಗೊಳಿಸಿ ಗರ್ಜಿಸುತ,
ಮಣಿಖಚಿತ ವರಸಿಂಹ ಪೀಠವ ನಲಂಕರಿಸಿ,
ನೀವಿಲ್ಲಿಗೈತಂದ ಕಾರಣವನೇನೆಂದು
ಕರುಣದಿಂ ಕೇಳುವೊಡೆ, ವ್ರತ ಫಲವು ಸಿದ್ಧಿಪುದು
ನಮಗಿಂದು || ೨೩ ||



ಕಾರ್ಗಾಲದಲ್ಲಿ ವನಶೈಲ ಗುಹಾಗರ್ಭದಲ್ಲಿ ಸಿಂಹಿಣಿಯೊಡನೆ ಸುಖನಿದ್ರೆ ಮಾಡುತ್ತ ಪವಡಿಸಿರುತ್ತದೆ. ವೀರಸಿಂಹ ಮಳೆಗಾಲ ಮುಗಿದ ಮೇಲೆ ಎಚ್ಚರಗೊಂಡು ಮೈಮುರಿದು ತನ್ನ ಶರೀರವನ್ನು ನೀಡಿ ನಿಜಗಂಧವುಳ್ಳ ಕೇಸರಗಳನ್ನು ಒದರುತ್ತದೆ; ಕೆಂಗಣ್ಣುಗಳಿಂದ ಕಿಡಿಸೂಸಿ ಕಾಡೆಲ್ಲ ನಡುಗುವಂತೆ ಗರ್ಜಿಸುತ್ತದೆ; ಸುತ್ತಲೂ ನೋಡುತ್ತ ಠೀವಿಯಿಂದ ಅಡಿಯಿಡುತ್ತ ಗವಿಯ ಬಾಗಿಲಿಗೆ ಬರುತ್ತದೆ; ಇಂಥ ಕಂಠೀರವನಂತೆ ನೀನೂ ನಾರಸಿಂಹ, ಓ ಕೃಷ್ಣ, ನೀಲಮೇಘಶ್ಯಾಮ, ಶಯ್ಯಾಗೃಹದಿಂದ ಅತಸೀ ಪುಷ್ಪದ ಕಾಂತಿಯುಳ್ಳ ನಿನ್ನ ದಿವ್ಯ ಮಂಗಳ ವಿಗ್ರಹವನ್ನು ತೋರುತ್ತ, ಮೃಗರಾಜ ಗತಿಯನ್ನು ಮೆರೆಯುತ್ತ ಠೀವಿಯಿಂದ ಅಡಿಯಿಡುವ ನಿನ್ನ ಪಾದವಿನ್ಯಾಸವೈಭವವನ್ನು ಕಾಣಬೇಕೆಂಬ ಆಸೆ ನಮಗಿದೆ. ಅನಂತರ ವರಸಭಾಮಂಟಪದಲ್ಲಿ ದಿವ್ಯ ಸಿಂಹಾಸನದ ಮೇಲೆ ಕುಳಿತು, 'ನೀವೇಕೆ ಬಂದಿರುವಿರಿ? ನಿಮಗೇನು ಬೇಕು' ಎಂದು ವಿಚಾರಿಸಿದರೆ ಸಾಕು; ನಮ್ಮ ವ್ರತವು ಸಿದ್ಧಿಸಿತೆಂದುಕೊಳ್ಳುತ್ತೇವೆ, ಓ - ಶ್ರೀಹರಿ ಎಂದು ಆಂಡಾಳ್ ತನ್ನ ಸಖಿಯರೊಂದಿಗೆ ಪ್ರಾರ್ಥಿಸುತ್ತಾಳೆ.

ಈ ಸಂದರ್ಭದಲ್ಲಿ ಆ ರಾಘವ ಸಿಂಹನ ವೈಭವವನ್ನೂ, ಹಿರಣ್ಯಕಶಿಪುವನ್ನು ಸೀಳುವಾಗಿನ ನಾರಸಿಂಹನ ಉಗ್ರರೂಪವನ್ನೂ ಪ್ರಹ್ಲಾದನ ವಿಷಯದಲ್ಲಿ ಅವನಿಗಿದ್ದ ವಾತ್ಸಲ್ಯವನ್ನೂ ಜ್ಞಾಪಿಸಿಕೊಳ್ಳಬಹುದು.

ಶ್ರೀ ನೃಸಿಂಹಾವತಾರ ವೈಭವ ಸೂಚಕ ವರ್ಣನೆ ಎಷ್ಟು ಅದ್ಭುತವೋ ಅಷ್ಟೇ ಸುಂದರ; ಶ್ರೀಮದ್ ರಾಮಾನುಜರ ಮಾತಿನಂತೆ ಸಿಂಹವು ಆನೆಯ ಮೇಲೆ ರೇಗಿ ಬಿದ್ದರೂ ತನ್ನ ಮರಿಗೆ ಮೊಲೆಯೂಡಿಸುವಷ್ಟು ಪ್ರೀತಿ, ವಾತ್ಸಲ್ಯ "ವಕ್ಷಸ್ತಸ್ಯ ವಿದಾರಯನ್ ನಿಜನಖೈರ್ವಾತ್ಸಲ್ಯಮಾಪಾದಯನ್" ಎಂಬ ಕೂರೇಶರ ವರ್ಣನೆ ಇಲ್ಲಿ ಕಣ್ಣಿಗೆ ಕಟ್ಟಿದಂತಿದೆ.

ಮೂಜಗವ ನಂದಳೆದ ನಿಮ್ಮಡಿಗೆ ಮಂಗಳವು,
ಲಂಕೆಯನು ಸದೆ ಬಡಿದ ನಿಜಭುಜಕೆ ಮಂಗಳವು,
ಶಕಟನನು ಒದ್ದೆಸೆದ ಕೀರುತಿಗೆ ಮಂಗಳವು,
ವತ್ಸನನು ಕವಣೆಯಂತೆಸೆದಡಿಗೆ ಮಂಗಳವು,
ಕೊಡೆಯಂತೆ ನಗವೆತ್ತಿ ಪಿಡಿದವಗೆ ಮಂಗಳವು



ವೈರಿಗಳ ಭಂಜಿಸಿದ ಭಲ್ಲೆಯಕೆ ಮಂಗಳವು
ಇಂತೆಂದು ನಿಜಯಶವ ಕೊಂಡಾಡಿ ಇಂಗಿತವ
ಸಾಧಿಸಲು ಬಂದಿಹೆವು ವ್ರತಫಲವು ಸಿದ್ಧಿಪುದು
ನಮಗಿಂದು || ೨೪ ||

ಅಂದು ಲೋಕಗಳನ್ನೆಲ್ಲ ಅಳೆದ ಓ ತ್ರಿವಿಕ್ರಮನೇ! ನಿನ್ನ ಶ್ರೀಪಾದಗಳಿಗೆ ಮಂಗಳ; ತೆಂಕಣ ಲಂಕೆಗೆ ತೆರಳಿ ದಶಶಿರನನ್ನು ಸಂಹರಿಸಿದ ನಿನ್ನ ಭುಜ ಬಲಕ್ಕೆ ಮಂಗಳ; ಹೊನ್ನಿನ ಗಾಲಿಗಳುಳ್ಳ ಶಕಟನನ್ನು ನಿನ್ನ ಪುಟ್ಟ ಪಾದಗಳಿಂದ ಒದೆದುಕೊಂದ ಕೀರ್ತಿಗೆ ಮಂಗಳ; ಕರುವಿನ ರೂಪದಲ್ಲಿ ಬಂದೆರಗಿದ ವತ್ಸಾಸುರನನ್ನು ಕವಣೆಯ ಕಲ್ಲಿನಂತೆ ಬೀಸಿ ಎಸೆದ ನಿನ್ನ ಪಾದ ಪಂಕಜಗಳಿಗೆ ಶುಭಮಂಗಳ; ಗೋವರ್ಧನ ಗಿರಿಯನ್ನು ಆತಪತ್ರದಂತೆ ಎಡಕಿರು ಬೆರಳಿನ ತುದಿಯಿಂದ ಎತ್ತಿ ಏಳುದಿನಗಳವರೆಗೆ ಕಲ್ಮಳೆಯ ಕೋಟಲೆಯಿಂದ ಗೋವಳಿಗರನ್ನು ತಲೆಗಾಯ್ದ ನಿನ್ನ ಸೌಶೀಲ್ಯ ಸೌಲಭ್ಯಗಳಿಗೆ ಮಂಗಳ; ವೈರಿಗಳನ್ನು ಸದೆ ಬಡಿಯುವ ನಿನ್ನ ಕರ ಕಮಲದ ವೇಲಾಯುಧಕ್ಕೆ ಜಯಮಂಗಳ, ಇಂತು ನಿನ್ನ ವಿವಿಧ ಪರಾಕ್ರಮ ಕೃತ್ಯಗಳನ್ನು ಕೊಂಡಾಡುತ್ತ ಬಂದೆರಗಿದ ದಾಸಭೂತರಾದ ನಮಗೆ ಪರೆಯನ್ನು ಅನುಗ್ರಹಿಸು; ಆಗ ಮಾತ್ರ ನಮ್ಮ ಈ ವ್ರತವು ಕೈಗೊಡುತ್ತದೆ, ಕೃಪೆ ಮಾಡು ಕೃಷ್ಣ" ಎಂದು ಗೋದಾದೇವಿ ದನಿಗರಗಿ ಪ್ರಾರ್ಥಿಸುತ್ತಾಳೆ, ಈ ಪದ್ಯದಲ್ಲಿ.

ಸ್ವಾಪದೇಶದಲ್ಲಿ ಭಗವತ್ ಸ್ವರೂಪ - ಹಿತ - ಪುರುಷಾರ್ಥಗಳೂ, ಆಚಾರ್ಯನ ತಿರುವಡಿಗಳ ಮಹಿಮೆಯೂ ಈ ಪಾಶುರದಲ್ಲಿ ಸೂಚಿತವಾಗುತ್ತಿವೆ ಎಂಬುದು ಜ್ಞಾನಿಗಳ ರಹಸ್ಯಾರ್ಥವಿವರಣೆ.

ಈ ರೀತಿಯ ಪದ್ಯಗಳು "ತೇವಾರಂ" (ಸುಂದರಹಾರ) ಎಂಬ ಶೈವ ಗ್ರಂಥಗಳಲ್ಲಿಯೂ ಸುಪ್ರಸಿದ್ಧ. ಶ್ರೀ ಮಾಣಿಕ್ಯವಾಚಕರು ತಮ್ಮ 'ತಿರುವಾಚಕ' ದಲ್ಲಿ ಪೋಟ್ರಿಕ್ಕೂರು ಹಿರಾರ್ ಶಿವಪೆರು ಮಾನಕ್ಕ್- ಎನ್ನಲಾಗಿದೆ.

ಶ್ರೀ ತಿರುಮಂಗೈ ಆಳ್ವಾರರು ತಮ್ಮ 'ತಿರುನೆಡುಂದಾಂಡಹ'ದಲ್ಲಿ ಹಾಡಿರುವ "ಕಲ್ಲೆಡುತ್ತ್ ಕಲ್ಮಾರಿ ಕಾತ್ತಾಯ್"........... ತುಣೈಮುಲ್ಲೈ ಮೇಲ್ ತುಳಿಶೋರಚ್ಚೋರ್ಕ್ಕಿನ್ರಾನೇ" ಎಂಬ ಪಾಶುರವನ್ನು ನೆನಪಿಸಿಕೊಳ್ಳುವುದು ಈ ಸಂದರ್ಭದಲ್ಲಿ ಸೂಕ್ತ.

**ಒರ್ವಳಿಗೆ ಶಿಶುವಾಗಿ ಸಂಜನಿಸಿ, ನಟ್ಟಿರುಳ**
**ವೇಳೆಯೊಳಿನ್ನೊರ್ವಳಿಗೆ ಮಗನಾಗಿ ಬಳೆಯುತಿರೆ,**
ಸೈರಿಸದ ಕೇಡಾಡಿ ಕಂಸನುದರದೊಳಂದು
ಕಿಚ್ಚಾಗಿ ನೆಲೆನಿಂತ ಪೇರೊಲವಿ ನಮ್ಮೊಡೆಯ,
ನೀನೆ ಗತಿಯೆಂದು ಬಂದಿಹೆವು ಅಭೀಷ್ಟವನು
ಸಲಿಸುವೊಡೆ ಸಿರಿಯೊಲಿವ ಸಂಪದದ, ಕಲಿತನದ
ಕೀರುತಿಯ ಕೊಂಡಾಡಿ ಸಂತಸದ ಸುಗ್ಗಿಯಿಂ
ನಲಿಯುವೆವು ಕೈಗೊಂಡ ವ್ರತಫಲವು ಸಿದ್ಧಿಪುದು
ನಮಗಿಂದು || ೨೫ ||

ಓ ಆದ್ಯಂತ ರಹಿತನೇ, ನಿನ್ನ ಲೀಲಾವೈಭವವನ್ನು ಏನೆಂದು ವರ್ಣಿಸಲಿ? ನಟ್ಟಿರುಳ ಸಮಯದಲ್ಲಿ ದೇವಕಿಗೆ ಮಗನಾಗಿ ಹುಟ್ಟಿದೆ. ಅದೇ ರಾತ್ರಿ ಗೋಕುಲದ ಯಶೋದೆಗೆ ಸಾಕುಮಗನಾದೆ. ಇದೇನು ವಿಚಿತ್ರ ನಿನ್ನದು? ಓ ಪರಪುಟ್ಟ, ಕೋಕಿಲ ಕಿಶೋರ, ಇಷ್ಟು ಗುಟ್ಟಾಗಿ ಬದುಕಿ ಬಳೆದರೂ ನಿನ್ನ ಸೋದರಮಾವನಾದ ಕಂಸನಿಗೆ ನಿನ್ನನ್ನು ಕಂಡರೆ ಹೊಟ್ಟೆಕಿಚ್ಚು, ಕಾಳ್ಗಿಚ್ಚು ಕಾಡನ್ನೇ ಸುಡುವಂತೆ ಅವನ ಹೃದಯಾಗ್ನಿಯಿಂದ ಅವನನ್ನೇ ಸುಟ್ಟುಬಿಟ್ಟೆ. ಹೆತ್ತತಾಯಿಗೆ ಅವತಾರ ರಹಸ್ಯ ಸಾಕುತಾಯಿಗೆ ಬಾಲಲೀಲಾ ರಹಸ್ಯ ಸೋದರ ಮಾವನಿಗೆ ಆತ್ಮನಾಶ ರಹಸ್ಯ - ಇವು ಮೂರನ್ನೂ ಏಕ ಕಾಲದಲ್ಲಿ ಪ್ರಕಟಿಸಿದ ಅಪ್ರಾಕೃತ ಲೀಲಾವಿಭೂತಿ ನೀನಯ್ಯ ಓ ಅಪ್ರಮೇಯ ತೇಜೋರಾಶಿ! ಸೃಷ್ಟಿಸ್ಥಿತಿ ಲಯಕಾರಕ! ನಮ್ಮ ಅಗಲಿಕೆಯ ನೋವನ್ನು ಹೋಗಲಾಡಿಸಿ ನಮ್ಮ ಬಯಕೆಯನ್ನು ಈಡೇರಿಸುವುದಾದರೆ ನಿನ್ನ ವಕ್ಷಸ್ಥಳದ ಲಕ್ಷ್ಮಿಯನ್ನೂ ನಿನ್ನ ಪರಾಕ್ರಮವನ್ನೂ ಕೊಂಡಾಡುತ್ತೇವೆ. ಈ ನಮ್ಮ ಪ್ರಾರ್ಥನೆಯು ನಿನ್ನ ಮನ ಮುಟ್ಟುವುದಾದರೆ ನಮ್ಮ ವ್ರತವು ಸಿದ್ಧಿಸುತ್ತದೆ" ಎಂದು ಆಂಡಾಳ್ ಈ ಪಾಶುರದಲ್ಲಿ ಶ್ರೀಕೃಷ್ಣನನ್ನು ಉಪೇಯನೂ ನೀನೇ, ಉಪಾಯವೂ ನೀನೇ ಎಂಬುದಾಗಿ ಸ್ತೋತ್ರಮಾಡುತ್ತಾಳೆ.

ಭಕ್ತಜನ ಕೃಪಾಕರ, ನೀಲಮಣಿನಿಭಾಕರ
ಕೇಳೆಮ್ಮ ಮಾರ್ಗಶಿರ ಮಜ್ಜನಕೆ ಪರಿಕರದ
ವಿವರಗಳ; ಧರೆಬಿರಿವ ಮಾಳ್ಕೆಯಲಿ ಬೊಬ್ಬಿರಿದು
ಪಾಂಚಜನ್ಯದೊಲೆಸೆವ ಪಾಲ್ಬಿಳಿಯ ಶಂಖಗಳ,

**ಪೇರುಲಿಯ ಭೇರಿಗಳ, ಶುಭದೀಪ ದೋಳಿಗಳ,**
**ಪತಾಕಾವಳಿಯ ಮೇಲ್ಗಟ್ಟುಗಳ, ಮೇಣ್ದಂದಿ**





ಮಾಗಧರ ದಯೆಗೈದು ನೀನೆಮಗೊಲಿದಿತ್ತೊಡೆ,
ವಟಪತ್ರ ತಾಯಿ ಕೇಳ್ ವ್ರತಫಲವು ಸಿದ್ಧಿಪುದು
ನಮಗಿಂದು || ೨೬ ||

ಭಕ್ತಜನ ವಾತ್ಸಲ್ಯ ಸಾರನಿಧೇ! ನೀಲರತ್ನದಂತೆ ಬೆಳಗುವ ದೇಹ ಕಾಂತಿಯುಳ್ಳ ಕೃಷ್ಣ! ಈರೇಳು ಲೋಕಗಳನ್ನೂ ನುಂಗಿ ಪ್ರಳಯಕಾಲದಲ್ಲಿ ಜೀರ್ಣಿಸಿಕೊಳ್ಳಲು ಆಲದೆಲೆಯ ಮೇಲೆ ಮಲಗಿಬಿಟ್ಟೆ, ಓ! ವಟಪತ್ರಶಾಯಿ, ಇದೀಗ ಧನುರ್ಮಾಸ ಪ್ರಾಪ್ತವಾಗಿದೆ. ಇದುವರೆಗೆ ಪಟಹವಾದ್ಯವನ್ನು ನೀಡೆಂದು ಕೇಳಿದೆವು; ನೀನು ಅದನ್ನು ಕೊಡುವ ಸೂಚನೆ ಕಾಣುತ್ತಿದೆ. ಹಿರಿಯರ ಸಂಪ್ರದಾಯದ ಪ್ರಕಾರ ನಮ್ಮ ವ್ರತಾಚರಣೆಗೆ ಬೇಕಾದ ಉಪಕರಣಗಳು ಹಲವಿದೆ. ಅವು ಯಾವುವೆಂದರೆ ಹೇಳುತ್ತೇವೆ ಕೇಳು; ಧೃತರಾಷ್ಟ್ರ ಪುತ್ರನ ಎದೆಯನ್ನು ಗಬ್ಬರಿಸುವ ಪಾಲ್ಪಿಳಿಯ ಪಾಂಚಜನ್ಯ ಶಂಖ, ಜಗತ್ತನ್ನೇ ತಮ್ಮ ಶಬ್ದದಿಂದ ನಡುಗಿಸುವ ಭೇರಿ, ದನಿಗರಗಿ ಮಂಗಳಾಶಾಸನ ಮಾಡುವ ಪೆರಿಯಾಳ್ವಾರ್ ಮತ್ತು ನಮ್ಮಾಳ್ವಾರ್ ಎಂಬ ಪ್ರಸಿದ್ಧಸ್ತುತಿ ಪಾಠಕರು, ಮಂಗಳದೀಪದಂತೆಸೆವ ನಪ್ಪಿನ್ನೇ, ಗರುಡಧ್ವಜಗಳು, ಆದಿಶೇಷನಂತಿರುವ ನಡುಚಪ್ಪರ - ಇವನ್ನೆಲ್ಲ ನೀನು ಅನುಗ್ರಹಿಸಿದರೆ ಮಾತ್ರ ನಮ್ಮ ಈ ವ್ರತವು ಸಾಂಗವಾಗಿ ನೆರವೇರುತ್ತದೆ ಎಂದು ಕೇಳಿಕೊಳ್ಳುತ್ತ ಶ್ರೀವಿಲ್ಲಿಪುತ್ತೂರಿನ ವಟಪತ್ರಶಾಯಿಯನ್ನು ಕುರಿತು ಪ್ರಾರ್ಥಿಸುತ್ತಾಳೆ ಶ್ರೀ ವಿಷ್ಣುಚಿತ್ತಾತ್ಮಜೆ ಗೋದಾದೇವಿ.

[ಶ್ರೀ ಗೋದಾದೇವಿ ತನ್ನ ತಂದೆ ವಿಷ್ಣುಚಿತ್ತರು ತಿರುಪ್ಪಲ್ಲಾಂಡು ಎಂಬ ಎರಡನೆಯ ಪಾಶುರದಲ್ಲಿ ಮಂಗಳಾಶಾಸನ ಮಾಡಿರುವ ಪಾಂಚಜನ್ಯವನ್ನು ಇಲ್ಲಿ ಜ್ಞಾಪಿಸಿಕೊಳ್ಳುತ್ತಾರೆ.

ಹಾಗೂ ತಿರುಪ್ಪಾಣಾಳ್ವಾರ್ ರವರು ಮನವಾರ ಮೆಚ್ಚಿ ಹಾಡಿರುವ "ಆಲಮಾ ಮರತ್ತಿನಿಲೈ ಮೇಲೊರು ಬಾಲಕನಾಯ್, ಞಾಲಮೆಳುಮುಣ್ಣಾನರಙ್ಗತ್ತರವಿನಣೈಯಾ‌ರ್," ಎಂಬ ಪಾಶುರದ ಭಾಗವನ್ನು ಇಲ್ಲಿ ಜ್ಞಾಪಿಸಿಕೊಂಡಂತಿದೆ.]

ಸನ್ನಿಧಿಗೆ ಬರದವರ ಸೆಳೆಯುವಾ ಗೋವಿಂದ,
ನಿಮ್ಮಡಿಯ ಕೊಂಡಾಡಿ ಸಂಗಳಿಸಿದಾ ಭರಣ



ಸಂಪದವ ಧರಿಸುವೆವು ಜಗಮೆಚ್ಚುವಂದದೊಳು;
ಘನತರದ ಕೈಗಡಗ ಕಾಲ್ಗಡಗ ತೋಳ್ಗಡಗ
ಕನ್ನವುರ ಕಿವಿಯೋಲೆಗಳ ತೊಟ್ಟು ನೀರ್ಮಿಂದು
ಪಟ್ಟುಡೆಯ ನಾವುಟ್ಟು ಮೊಳಕೈಯನ್ನೆವರ
ಘೃತಧಾರೆ ವೊಸರುತಿರೆ ಹಾಲನ್ನ ತಣಿಯುಂಡು
ತೇಗುವೆವು ಕೈಗೊಂಡ ವ್ರತಫಲವು ಸಿದ್ಧಿಸಿತು ನಮಗೆಂದು ||೨೭||

ವಿಷ್ಣು ಭಕ್ತರಿಗೆ ಬೇಕಾದ ಬ್ರಹ್ಮಸೂತ್ರ, ಕರ್ಣಕುಂಡಲ, ಶ್ರೀಗಂಧ, ಘೃತಾನ್ನ, ನಿರಂತರ ಸೇವೆ, ತಾಂಬೂಲ-ಇವನ್ನೆಲ್ಲಾ ಅನುಗ್ರಹಿಸಿ ತನ್ನನ್ನು ಪರಿಶುದ್ಧಾತ್ಮನನ್ನಾಗಿ ಮಾಡಬೇಕೆಂದು ಶ್ರೀ ವಿಷ್ಣುಚಿತ್ತರು ಶ್ರೀಹರಿಯನ್ನು ಕೇಳಿಕೊಂಡರು. ಅವರ ಮಗಳಾದ ಆಂಡಾಳ್ ತನ್ನ ತಿರುಪ್ಪಾವೈಯ ಎರಡನೆಯ ಪಾಶುರದಲ್ಲಿ ಆರು ವರ್ಜ್ಯಾಂಶಗಳನ್ನು ಹೇಳಿ ಪ್ರತಿಜ್ಞೆ ಮಾಡಿದ್ದಳು. ಈಗ ಅವಳಿಗೆ ತನ್ನ ಅಭೀಷ್ಟವು ನೆರವೇರಿತೆಂಬ ಸಂತೋಷ; ಆದ್ದರಿಂದ ಆನಂದ ಭೈರವಿರಾಗದಲ್ಲಿ ಹಾಡಿಕೊಂಡು ಕೈಬಳೆ ತೋಳುಬಳೆ (ನಾಗಮುರಿ) ಕಿವಿಯೋಲೆ ಕರ್ಣಪುಷ್ಪ ಕಾಲಂದಿಗೆ - ಎಲ್ಲವನ್ನೂ ತೊಟ್ಟು ಪೀತಾಂಬರವನ್ನು ಉಟ್ಟು ಮೊಳಕೈವರೆಗೆ ತುಪ್ಪ ಹರಿದು ಬರುವಂಥ ಕ್ಷೀರಾನ್ನವನ್ನು ಸವಿದು ಚಪ್ಪರಿಸುವಳಂತೆ, ತನ್ನ ಹಿಂದಿನ ಶಪಥವನ್ನು ಬಿಟ್ಟು; ಇದಲ್ಲದೆ ಶ್ರೀಕೃಷ್ಣನ ಅನುಗ್ರಹವೂ ಬೇಕಂತೆ ಆಕೆಗೆ.

ನಿರ್ಭರ ವಾತ್ಸಲ್ಯಾಮೃತ ವರ್ಷವನ್ನು ಕರೆದು ನಿನ್ನೆಡೆಗೆ ಬಂದು ಸೇರದಿರುವವರನ್ನು ಸನ್ನಿಧಿಗೆ ಸೆಳೆಯುವ ಗೋವಿಂದ! ಜಗದ್ರಕ್ಷಕ! ನಿನ್ನ ಪಾದಪದ್ಮಗಳನ್ನು ಆಶ್ರಯಿಸಿ ಬಯಸಿದ ಆಭರಣಗಳನ್ನೆಲ್ಲಾ ಸಂಪಾದಿಸಿಕೊಂಡೆವು. ಈದೀಗ ಮಂಗಳ ಸ್ನಾನ ಮಾಡಿ ಪೀತಾಂಬರವನ್ನುಟ್ಟು ಹಿಂದೆ ಒತ್ತಟ್ಟಿಗಿಟ್ಟಿದ್ದ ಒಡವೆಗಳನ್ನೆಲ್ಲಾ ತೊಟ್ಟು ಮೊಳಕೈವರೆಗೆ ತುಪ್ಪ ಹರಿದು ಬರುವಂಥ ಸಿಹಿ ಪೊಂಗಲನ್ನು ಚಪ್ಪರಿಸುತ್ತ ಸವಿದು ತೇಗುತ್ತವೆ. ಇಂದೀಗ ನಮ್ಮ ವ್ರತವು ಫಲಿಸಿತೆಂಬ ತೃಪ್ತಿಯಿಂದ ನಲಿಯುತ್ತೇವೆಂದು ಆಂಡಾಳ್ ಶ್ರೀಕೃಷ್ಣನಿಗೆ ಮೊರೆಯಿಡುತ್ತಾಳೆ.

ಧೇನುಗಳ ಬೆಂಬತ್ತಿ ಕಾನನದಿ ಸಲೆಕಲೆತು
ತಣಿಯುಂಡು ಸಹಜಾತ ಸರಸ ದಿಂದೈ ತಂದ



ಗೋಕುಲದ ತಿಳಿವಿಲ್ಲದೆಗ್ಗರು ಕಣಾ ನಾವು
ನಾವೆಸಗಿದಪರಾಧ ವೆಣಿಸದಿರು ಗೋವಿಂದ!
ಕಡುನಂಟು ನಮಗುಂಟು ನಿನ್ನೊಡನೆ; ಅದರಿಂದೆ
ಸಲಿಗೆಯಿಂ ಕಿರುವೆಸರ ನಿನಗಿಟ್ಟು ಕರೆದೆವೈ
ಕೋಪಿಸದೆ ಕರುಣಿಪುದು ಕನ್ನೆಯರ ಕೋರಿಕೆಯ
ನಮ್ಮೊಡೆಯ! ಕೈಗೊಂಡ ವ್ರತಫಲವು ಸಿದ್ಧಿಪುದು
ನಮಗಿಂದು || ೨೮ ||

ಕರುಗಳ ಹಿಂದೆ ಕಾನನಕ್ಕೆ ತೆರಳಿ ತಂದ ಬುತ್ತಿಯನ್ನು ತಿನ್ನೋಣ. ಏನನ್ನೂ ಅರಿಯದ ಗೋಪ ಕುಲದಲ್ಲಿ ನಮ್ಮೊಡನಾಡಿಯಾಗಿ ನೀನು ಹುಟ್ಟಿರುವುದೇ ನಮಗೊಂದು ಭಾಗ್ಯೋದಯ. ಯಾವ ಕುಂದು ಕೊರತೆಗಳೂ ಇಲ್ಲದೆ ಸ್ವಸಂಪೂರ್ಣ ಸ್ವರೂಪನಾದ ಗೋವಿಂದಾ, ಮಂಗಳಾಂಗ, ನಿನ್ನೊಡನೆ ನಮಗಾದ ನಂಟು ಜಾರಿ ಹೋಗುವುದಲ್ಲ; ನಮಗೂ ನಿನಗೂ ಎಂದೆಂದಿಗೂ ಶಾಶ್ವತವಾದ ಸಂಬಂಧವುಂಟು. ಆದರೆ ಜ್ಞಾನ ಶೂನ್ಯರಾದ ಮುಗ್ಧೆಯರು ನಾವು, ನಿನ್ನ ಮೇಲಿನ ಕಟ್ಟೊಲವಿನಿಂದ ಸಣ್ಣ ಸಣ್ಣ ಸಲಿಗೆಯ ಮಾತುಗಳನ್ನಾಡಿ ನಿನ್ನನ್ನು ಕರೆದು ಬಿಟ್ಟೆವು, ಅರ್ಜುನನಂತೆ, ಕೋಪಿಸದೆ ಕ್ಷಮಿಸಿ ಬಿಡಪ್ಪ ಕೃಷ್ಣ, ನಮ್ಮ ಪ್ರಾರ್ಥನೆಯನ್ನು ಈಡೇರಿಸು; ತರಳೆ ಇವಳೆಂದು ಮನ್ನಿಸು ಮನ್ನಿಸು ಓ ಕೃಪಾನಿಧೆ.

ಸಖೇತಿಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ ಪ್ರಣಯೇನ ವಾಪಿ

ಈ ಭಗವದ್ ಗೀತಾ ಶ್ಲೋಕವು ಗೋದಾದೇವಿಯ ಮೇಲಿನ ಪದ್ಯಕ್ಕೆ ಅನ್ವಯವಾಗುತ್ತದಲ್ಲವೆ!

ನಸುಮಸುಕಿನೊಳೆ ನಿನ್ನ ಪೊನ್ನಡಿಯ ಪಂಕಜಕೆ
ಮುಡಿ ಚಾಚಿ ಬೇಡುವೆವು ಗೋಕುಲದ ತುರುಗಾಹಿ
ವಂಶದೊಳು ಸಂಜನಿಸಿದೆಮ್ಮೊಡೆಯ ಗೋವಿಂದ!
ನಿನ್ನಂತರಂಗ ಸೇವೆಗಲ್ಲದಿರಲೆಮಗಿನ್ನು
ಪೆರತಾವ ಕಾಮಿತಕೆ ಮನಸೋಲದಂದದೊಳು
ಕರುಣಿಸೈ ಗೋಪಾಲ! ಏಳೇಳು ಪೀಳಿಗೆಯ
ಪರಿಯಂತ ನಿಮ್ಮಡಿಗೆ ಕೈಂಕರ್ಯವೆಸಗುವೆವು
ನಿರುತದಿಂ ಸಿದ್ಧಿಸಲಿ ಕೈಗೊಂಡ ವ್ರತಫಲವು ನಮಗಿಂದು ||೨೯||

ಬೆಳಗು ಹರಿಯುವ ಮುನ್ನ ನಸುಕಿನಲ್ಲಿಯೇ ಎದ್ದು ಬಂದಿದ್ದೇವೆ. ನಿನ್ನ ಸ್ವರ್ಣಮಯ ಪಾದ ಪಂಕಜಗಳಿಗೆ ಮಂಗಳಾಶಾಸನ ವೆಸಗುವ ನಮ್ಮ ಉದ್ದೇಶವಾದರೂ ಏನಿರಬಹುದೆಂಬುದನ್ನು ಬಲ್ಲೆಯಾ? ಗೋವಳಿಗ ಕುಲದಲ್ಲಿ ಹುಟ್ಟಿದ ನಮ್ಮೊಡೆಯಾ? ನಮ್ಮ ಆದರದ ಕೈಂಕರ್ಯಗಳನ್ನು ನೀನು ಒಪ್ಪಿಕೊಳ್ಳದಿರಬಾರದು. ಮೊದಲು ಪರೆಯೊಂದನ್ನು ಕೇಳಿದರು, ಕೊಟ್ಟಾಯಿತು; ಇನ್ನೂ ಇವರ ಕಾಟ ತಪ್ಪಲಿಲ್ಲವಲ್ಲ ಎಂದು ಬೇಸರ ಪಟ್ಟುಕೊಳ್ಳದೇಡ ಗೋವಿಂದಾ. ನಿನ್ನಿಂದ ನಮಗೆ ಆಗ ಬೇಕಾದುದು ಇನ್ನೂ ಇದೆ. ಪರೆಯನ್ನು ಕೊಡೆಂದು ಕೇಳಿಕೊಂಡದ್ದು ಒಂದು ನೆಪಮಾತ್ರ. ನಮ್ಮ ಅಂತರಂಗದ ಗುಟ್ಟನ್ನು ರಟ್ಟು ಮಾಡುವುದಾದರೆ ಬಾಯಿಬಿಟ್ಟು ಹೇಳಿಬಿಡುತ್ತೇವೆ ಕೇಳು; ಇನ್ನ ನಮ್ಮ ಏಳೇಳು ಜನ್ಮಗಳಲ್ಲಿಯೂ, ನಿನ್ನ ಮಿಕ್ಕೆಲ್ಲ ಅವತಾರಗಳಲ್ಲಿಯೂ, ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಿತ್ಯಕೈಂಕರ್ಯ ಸಾಮ್ರಾಜ್ಯವು ನಮಗೆ ಲಭಿಸುವಂತೆ ಅನುಗ್ರಹಿಸು. ನಮ್ಮ ನಿಮ್ಮ ಪರಸ್ಪರ ಸಂಬಂಧದಲ್ಲಿ ಎಂದೆಂದಿಗೂ ಅಗಲಿಕೆ ಇಲ್ಲದಿರಲಿ, ಇನ್ನಾವ ಕಾಮನೆಗಳೂ ನಮ್ಮ ಮನದಲ್ಲಿ ಮೂಡದಿರಲಿ. ನಮ್ಮ ಸೇವಾ ತತ್ಪರತೆಯ ರಹಸ್ಯವಿದು ಕಣಾ, ನಮ್ಮ ಸಲಿಗೆ ಬಿನ್ನಪವನಾದರಿಸಿ ಕೇಳಯ್ಯ.(ನಮ್ಮ 'ಕೋಯಿಲಣ್ಣನ್' ಎಂಬ ಹೆಸರಾಂತ ಶ್ರೀಮದ್ ರಾಮಾನುಜಾಚಾರ್ಯ ತಮ್ಮ ಶರಣಾಗತಿ ಗದ್ಯದಲ್ಲಿ ಹೀಗೆಯೇ ಮೊರೆಯಿಟ್ಟಿದ್ದಾರೆ) - ಎಂದು ಮೊದಲಾಗಿ ಶ್ರೀ ಗೋದಾದೇವಿ ತನ್ನ ಸಖಿಯರೊಡನೆ ಮನಬಿಚ್ಚಿ ಮಾತಾಡಿದ್ದಾಳೆ ತನ್ನ ವ್ರತ ಸಾಂಗವಾಗಿ ನೆರವೇರಿ ಫಲಪ್ರಾಪ್ತಿಯಾಗಲೆಂದು.

ಸುಂದರಾಭರಣ ಸಂಪದದಿಂದು ವದನೆಯರು
ಹಡಗುಗಳಿಡಿದ ನೀಳ್ಗಡಲ ಕಡೆದ ಮಾರಮಣ
ಕೇಶವನ ಕೊಂಡಾಡೆ, ತಣ್ಕಮಲ ಮಣಿಹಾರ





ಕಂಧರರಥಿ ಕಂಗೊಳಿಪ ತಿರುವಿಲ್ಲಿಪುತ್ತೂರ
ವರವಿಷ್ಣು ಚಿತ್ತಸುತೆ ಗೋದೆ ತಾಂ ವಿರಚಿಸಿದ
ಚೆಂದಮಿಳ ಮೂವತ್ತು ಗೀತೆಗಳ ತಪ್ಪದಿರೆ
ಪಾಡುವೊಡೆ, ಈರೆರಡು ಶೈಲಸಮಬಾಹುಗಳ
ಕಮಲಾಕ್ಷನೊಲಿಯುವನು ಸಂತಸದ ವ್ರತವಲವ
ನಮಗಿತ್ತು || ೩೦ ||

"ಅಮೃತ ಸಾಗರದ ಮೇಲೆ ಹಲವಾರು ಹಡಗುಗಳು ತೇಲಾಡುತ್ತಿವೆ. ಸಮುದ್ರದಲ್ಲಿ ಅಲೆ ಎದ್ದರೂ ದೋಣಿಗಳು ಮುಳುಗದಂತೆ ಪಾಲ್ಗಡಲನ್ನು ಕಡೆದ ಲಕ್ಷ್ಮೀಪತಿಯಾದ ಕೇಶವನನ್ನು ಸ್ತೋತ್ರ ಮಾಡಿದರೆ ಅವನು ನಮ್ಮ ಇಷ್ಟಾರ್ಥವನ್ನು ನೆರವೇರಿಸುತ್ತಾನೆ. ರಮಣೀಯವಾದ ಆಭರಣಗಳನ್ನು ತೊಟ್ಟ ಇಂದು ವದನೆಯರು ನಾವು. ನಮ್ಮ ತವರೂರು ಸುಂದರವಾದ ಪುದುವೈ ಎಂದು ಪ್ರಸಿದ್ಧವಾದ ಶ್ರೀವಿಲ್ಲಿಪುತ್ತೂರು, ರಮ್ಯವಾದ ತಾವರೆ ಮಣಿಹಾರವನ್ನು ಕೊರಳಲ್ಲಿ ಧರಿಸಿರುವ ಭಟ್ಟನಾಥರೆಂದು ಹೆಸರಾಂತ - ಪೆರಿಯಾಳ್ವಾರರ ಮಗಳಾದ ಗೋದಾದೇವಿಯು ವಿರಚಿಸಿದ ಸಂಘತಮಿಳಿನ ಈ ಮೂವತ್ತು ಪದ್ಯ ಮಾಲೆಯನ್ನು ತಪ್ಪದೆ ಅನುಸಂಧಾನ ಮಾಡೋಣ. ಆಗ ಪರ್ವತೋಪಮವಾದ ನಾಲ್ಕು ತೋಳುಗಳುಳ್ಳ ಕಮಲಾಕ್ಷನಾದ ಲಕ್ಷ್ಮೀಪತಿಯು ಪ್ರಸನ್ನ ಮುಖನಾಗಿ ಪರಮಾನುಗ್ರಹ ಬೀರುತ್ತಾನೆ. ಇದರಿಂದ ಶಾಶ್ವತಾನಂದವನ್ನು ಹೊಂದಿ ನಮ್ಮ ಅದ್ವಿತೀಯವಾದ ಈ ನೋಂಪಿ ಸಾಂಗವಾಗಿ ನೆರವೇರಿ ಫಲಪ್ರದವಾಗುತ್ತದೆ.

ಶ್ರೀ ಆಂಡಾಳ್ ತಿರುವಡಿಗಳೇ ಶರಣಂ

"ಇತಿ ವಿಕಸಿತ ಭಕ್ತೇರುತ್ಥಿತಾಂ ವೇಂಕಟೇಶಾತ್
ಬಹುಗುಣರಮಣೀಯಾಂ ವಕ್ತಿ ಗೋದಾಸ್ತುತಿಂ ಯಃ
ಸಭವತಿ ಬಹುಮಾನ್ಯಃ ಶ್ರೀಮತೋ ರಂಗ ಭರ್ತುಃ
ಚರಣ ಕಮಲ ಸೇವಾಂ ಶಾಶ್ವತೀ ಮಭ್ಯುಪೈಷ್ಯನ್"
--ಶ್ರೀಮದ್ ವೇದಾಂತದೇಶಿಕರು.

ಶ್ರೀ ಗೋದಾದೇವಿ ಆಚರಿಸಿ ವಿರಚಿಸಿದ "ತೋಲ್‌ಪಾವೈ" ಎಂಬ ಪ್ರಾಚೀನ ವ್ರತದ ಹಿನ್ನಲೆ ಹೀಗಿದೆ:

ಹೇಮಂತೇ ಪ್ರಥಮೇ ಮಾಸಿ ನಂದವ್ರಜ ಕುಮಾರಿಕಾಃ
ಚೇರುರ್ಹವಿಷ್ಯಂ ಭುಂಜಾನಾ ಮಾಸಂ ಕಾತ್ಯಾಯನೀ ವ್ರತಮ್

ಆಪ್ಲುತ್ಯಾಂಭಸಿ ಕಾಳಿಂದ್ಯಾ ಜಲಾಂತೇ ಚೋದಿತೇಽರುಣೇ
ಕೃತ್ವಾ ಪ್ರತಿಕೃತಿಂ ದೇವೀ ಮಾನರ್ಚುರ್ನೃಪ ಸೈಕತೀಮ್

ಗಂಧೈರ್ಮಾಲ್ಯೈಃ ಸುರಭಿರ್ಬಲಿಭಿರ್ಧೂಪ ದೀಪಕೈಃ
ಉಚ್ಚಾವಚೈಶ್ಚೋಪಹಾರೈಃ ಪ್ರವಾಲಫಲತಂಡುಲೈಃ

ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ
ನಂದಗೋಪಸುತಂ ದೇವಿ ಪತಿಂ ಮೇ ಕುರು ತೇ ನಮಃ

ಇತಿ ಮಂತ್ರಂ ಜಪಂತಸ್ತಾಃ ಪೂಜಾಂ ಚಕ್ರುಃ ಕುಮಾರಿಕಾಃ
ಏವಂ ಮಾಸಂ ವ್ರತಂ ಚೇರುಃ ಕುಮಾರ್ಯಃ ಕೃಷ್ಣಚೇತಸಃ
ಭದ್ರಕಾಳೀಂ ಸಮಾನರ್ಚುರ್ಭೂಯಾನ್ನಂದ ಸುತಃ ಪತಿಃ

ಉಷಸ್ಯುತ್ಥಾಯ ಗೋತ್ರೈಸ್ಸ್ವೈಃ ಅನ್ಯೋನ್ಯಬದ್ಧ ಬಾಹವಃ
ಕೃಷ್ಣ ಮುಚ್ಚೈರ್ಜಗುರ್ಯಾಂತ್ಯಃ ಕಾಳಿಂದ್ಯಾಂ ಸ್ನಾತುಮನ್ವಹಮ್

ತಾಸಾಂ ವಿಜ್ಞಾಯ ಭಗವಾನ್ ಸ್ವಪಾದಸ್ಪರ್ಶಕಾಮ್ಯಯಾ
ಧೃತವ್ರತಾನಾಂ ಸಂಕಲ್ಪಂ ಆಹ ದಾಮೋದರೋಽಬಲಾಃ

ಸಂಕಲ್ಪೋ ವಿದಿತಸ್ಸಾಧ್ವ್ಯೋ ಭವತೀನಾಂ ಮದರ್ಚನೇ
ಮಯಾನು ಮೋದಿತಸ್ಸೋಽಸೌ ಸತ್ಯೋ ಭವಿತುಮರ್ಹತಿ
ನ ಮಯ್ಯಾವೇಶಿತಧಿಯಾಂ ಕಾಮಾಃ ಕಾಮಾಯ ಕಲ್ಪತೇ
ಬರ್ಜಿತಾಃ ಕ್ವಥಿತಾ ಧಾನಾ ಪ್ರಾಯೋ ಬೀಜಾಯ ನೇಷ್ಯತೇ

ಶ್ರೀ ಶುಕ ಬ್ರಹ್ಮರು ಹಾಡಿದ ಶ್ರೀಮದ್ ಭಾಗವತದ ದಶಮಸ್ಕಂಧದ ೨೨ ನೇ ಅಧ್ಯಾಯದಿಂದ ಉಲ್ಲೇಖಿತ.

ಶ್ರೀಮತೆ ರಾಮಾನುಜಾಯ ನಮಃ

## ಶ್ರೀ ಗೋದಾದೇವಿಯ ಪರಿಚಯ

ಗೋದೆ ಜನಿಸಿದ ಊರು ಗೋವಿಂದನೂರು,
ಪಜ್ವಳಿಪ ಮಣಿಖಚಿತ ಸೌಧಗಳ ಊರು,
ನೀತಿಯಿಂ ನಲ್ನಡೆಯ ಭಕ್ತರಾ ಊರು,
ನಾಲ್ವೇದ ಪಾರಗರು ಬಾಳ್ಸವಿದ ಊರು,
ವೇದ ವಿತ್ತುಗಳ ವರವಿಲ್ಲಿಪುತ್ತೂರು,

## ಶ್ರೀ ಗೋದಾದೇವಿಯ ಮಂಗಳಾಶಾಸನ

ತಿರುವಾಡಿಪ್ಪೂರ ದಂದಿಳೆಗುದಿಸಿ ಬಂದವಳು ಬಾಳ್ಗಿ;
ಮೂವತ್ತು ಪದ್ಯಗಳ ತಿರುಪ್ಪಾವೈಯೊರೆದವಳು ಬಾಳ್ಗಿ;
ಪೆರಿಯಾಳ್ವಾರೆತ್ತಿ ಸಲಹಿ ಸಾಕಿದ ವರಗುವರಿ ಬಾಳ್ಗಿ;
ಪೆರುಂಬೂದೂರ ಮಾಮುನಿವರರ ಸೋದರಿಯು ಬಾಳ್ಗಿ;

## ತಿರುಪ್ಪಾವೈ ಪದ್ಯಮಾಲೆಯ ಹಿರಿಮೆ

ಪಾತಕಂಗಳ ಕಳೆದು ಪರಮಾತ್ಮನಡಿ ತೋರಿ
ನಾಲ್ವೇದಗಳಿಗೆಲ್ಲ ಬೀಜಕಾರಣವೆನಿಪ
ಗೋದೆಯಾ ಚೆಂದಮಿಳಿನೈದೈದು ಮತ್ತೈದು
ಪದ್ಯಗಳನರಿಯದಿಹ ನರರಿಳೆಗೆ ಹೊರೆಯಲ್ತೆ?

ನೂರನಾಲ್ವತ್ತು ಮೂರು ಪದ್ಯಗಳ ನೊರೆದವಳು ಬಾಳ್ಗಿ;
ರಂಗನಿಗೊಸೆದು ಮಾಲೆಯನು ಸೂಡಿದಂಗನೆಯು ಬಾಳ್ಗಿ;
ನರುಮರುಗದಿಂದೆಸೆವ ತಿರುಮಲ್ಲಿ ನಲ್ನಾಡು ಬಾಳ್ಗಿ;
ವರಪುದುವೆ ಪತ್ತನದ ಗೋದೆಯಾ ಮಲರಡಿಯು ಬಾಳ್ಗಿ;

"ಭದ್ರಂ ಶುಭಂ ಮಂಗಳಂ"

# ಕಾಳಿದಾಸನ ಕೃತಿಗಳಲ್ಲಿ ರಾಷ್ಟ್ರೀಯ ಏಕತೆ

---ಎಚ್. ವಿ. ನರಸಿಂಹಮೂರ್ತಿ.

ಭಾರತವು ಒಂದು ಅಖಂಡರಾಷ್ಟ್ರ. ವಿಶಾಲವಾದ ಈ ದೇಶದಲ್ಲಿ ಭಾಷೆ - ಸಂಪ್ರದಾಯ - ಜೀವನ ಕ್ರಮ - ವೇಷ - ಭೂಷಣ - ಇತ್ಯಾದಿಗಳಲ್ಲಿ ವೈವಿಧ್ಯ ಕಂಡುಬರುವುದರಿಂದ ಭಾರತವು ಅಖಂಡ ಸಾಮ್ರಾಜ್ಯವಲ್ಲವೇನೋ ಎಂಬ ಭ್ರಾಂತಿ ಉಂಟಾಗುವುದು ಸಹಜ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ವಿವಿಧತೆಗಳ ನಡುವೆಯೂ ಒಂದು ತರನಾದ ಏಕತೆ ನಮಗೆ ಕಾಣುತ್ತದೆ. ಸಂಸ್ಕೃತ ಸಾಹಿತ್ಯದ ರಸಸಿದ್ಧ ಮಹಾಕವಿ ಕಾಳಿದಾಸ ತನ್ನ ಕೃತಿಗಳಲ್ಲೆಲ್ಲ ಸಾರುವುದು ಈ ರಾಷ್ಟ್ರೀಯ ಏಕತೆಯ ಸಂದೇಶವನ್ನು. ಅವನ ಕಾವ್ಯಗಳಲ್ಲಿ ಈ ಏಕತೆಯ ವಿವಿಧ ಭಾವ ಭಂಗಿಗಳಲ್ಲಿ ನರ್ತಿಸುತ್ತದೆ; ಅವನ ನಾಟಕಗಳಲ್ಲಂತೂ ವಿಶ್ವರಂಗಮಂಟಪದ ಮೇಲೆ ಏಕತೆಯನ್ನು ಸಾರುವ ಭಾರತೀಯ ಸಂಸ್ಕೃತಿಯು ತನ್ನ ಭವ್ಯರೂಪವನ್ನು ಪ್ರದರ್ಶಿಸುತ್ತದೆ. ಅವನ ಮಾತುಗಳೆಲ್ಲ ಈ ರಾಷ್ಟ್ರೀಯ ಭಾವನೆಯಿಂದ ಓತಪ್ರೋತವಾಗಿವೆ.

ಕಾಳಿದಾಸನದು ಅಖಂಡಭಾರತದ ಕಲ್ಪನೆ. ಅಭಿಜ್ಞಾನ ಶಾಕುಂತಲದಲ್ಲಿ ಕಾಳಿದಾಸ ಈಶ್ವರನ ಅಷ್ಟಮೂರ್ತಿಗಳನ್ನು ಉಲ್ಲೇಖಿಸುತ್ತಾನೆ. ಕುಮಾರ ಸಂಭವದಲ್ಲಿಯೂ ಸಹ ಈ ಅಷ್ಟಮೂರ್ತಿಗಳನ್ನು ವಿಸ್ತಾರವಾಗಿ ವರ್ಣಿಸಿ, ಜಗತ್ತಿನ ರಕ್ಷಣಾಕಾರ್ಯವನ್ನು ಸ್ಪಷ್ಟವಾಗಿ ಸೂಚಿಸಿದ್ದಾನೆ. ಮಾಲವಿಕಾಗ್ನಿಮಿತ್ರದ ನಾಂದೀಶ್ಲೋಕದಲ್ಲೂ ಅಷ್ಟಮೂರ್ತಿಗಳ ಉಲ್ಲೇಖವಿದೆ. ಪರಮಾತ್ಮನ ಎಂಟು ಮೂರ್ತಿಗಳಾದ ಸೂರ್ಯ - ಚಂದ್ರ - ಯಜಮಾನ - ಪೃಥ್ವೀ - ಜಲ - ಅಗ್ನಿ - ವಾಯು ಮತ್ತು ಆಕಾಶಗಳು ಪ್ರತ್ಯಕ್ಷವಾಗಿ ದೃಷ್ಟಿಗೋಚರವಾಗುತ್ತವೆ. 'ಪ್ರತ್ಯಕ್ಷಾಭಿಃ ಪ್ರಪನ್ನಃ ತನುಭಿರವತುವಃ ತಾಭಿರಷ್ಟಾಭಿರೀಶಃ' ಎಂದು ಸ್ತೋತ್ರಮಾಡುವುದರ ಮೂಲಕ ಕವಿ ಕಾಳಿದಾಸ ಭಾರತದ ಅಖಂಡತೆಯನ್ನು ಸೂಚಿಸುತ್ತಾನೆ. ಏಕೆಂದರೆ ಈಶ್ವರನ ಈ ಅಷ್ಟಮೂರ್ತಿಗಳು ಭಾರತದ ಉತ್ತರದಲ್ಲಿರುವ ನೇಪಾಳದಿಂದ ದಕ್ಷಿಣದಲ್ಲಿರುವ ಚಿದಂಬರದವರೆಗೂ, ಪಶ್ಚಿಮದ ಕಾಠೇವಾಡದಿಂದ ಪೂರ್ವದ ಬಂಗಾಳದ ವರೆಗೂ ಹರಡಿ ಸಮಗ್ರಭಾರತದ ಆಧ್ಯಾತ್ಮಿಕ ಏಕತೆಯನ್ನು ಘೋಷಿಸುತ್ತವೆ.

ಭಾರತದ ಪ್ರಕೃತಿ ವೈಭವದ ಭವ್ಯ ಕಲ್ಪನೆಯನ್ನು ಓದುಗರ ಎದುರಿಗಿರಿಸುವ ಮೇಘ ಉತ್ತರ - ದಕ್ಷಿಣವೆಂಬ ಭೇದವಿಲ್ಲದೆ ದಾರಿಯುದ್ದಕ್ಕೂ ಕಾಣುವುದು ಈ ದೇಶದ ನದಿ - ನದಗಳನ್ನು; ಪುಣ್ಯಕ್ಷೇತ್ರಗಳನ್ನು; ಹೊಲಗದ್ದೆಗಳನ್ನು; ಪ್ರಕೃತಿದೇವಿಯ ಮೈಮರೆತ ನರ್ತನವನ್ನು. ಈ ಪವಿತ್ರಭಾರತದ ಮಣ್ಣಿನ ಕಣ - ಕಣವೂ ಏಕತೆಯನ್ನು ಸಾರುತ್ತವೆ; ಅಖಂಡತೆಯನ್ನು ದೋಧಿಸುತ್ತದೆ - ಎಂದು ಬಲವಾಗಿ ನಂಬಿದವ ಕಾಳಿದಾಸ. ಪೂರ್ವ - ಪಶ್ಚಿಮ ಸಮುದ್ರಗಳನ್ನು ವ್ಯಾಪಿಸಿ ನಿಂತಿರುವ ಹಿಮಾಲಯ ಅವನಿಗೆ ದೇವತಾತ್ಮ; ಪೃಥ್ವಿಯ ಮಾನದಂಡ; ವಾಗರ್ಥಗಳಂತೆ ಪರಸ್ಪರ ಬೆಸೆದು ನಿಂತಿರುವ ಅರ್ಧನಾರೀಶ್ವರನಾದ ಶಿವ ಏಕತೆಯ ಭವ್ಯ ಪ್ರತೀಕ. ಅವನ ನೆಲೆಯಾದ ಕೈಲಾಸ ಸಮಗ್ರ ಭಾರತದ ಪ್ರತಿರೂಪ.

ಕಾಳಿದಾಸನ ರಘುವಂಶ ಭಾರತದ ಏಕತೆಯನ್ನು ಮತ್ತಷ್ಟು ಪ್ರಬಲವಾಗಿ ಪ್ರತಿಪಾದಿಸುತ್ತದೆ. ಈ ಕಾವ್ಯದ ನಾಲ್ಕನೆಯ ಸರ್ಗದಲ್ಲಿ ರಘುಮಹಾರಾಜನ ದಿಗ್ವಿಜಯದ ಮನೋಜ್ಞ ವರ್ಣನೆ ಇದೆ. ತಂದೆಯಾದ ದಿಲೀಪನಿಂದ ರಾಜ್ಯಾಧಿಕಾರವನ್ನು ಪಡೆದ ರಘು ಆಹ್ಲಾದಕರವಾದ ಶರದೃತುವಿನಲ್ಲಿ ದಿಗ್ವಿಜಯ ಹೊರಡುತ್ತಾನೆ. ಆತ ವಂಗ - ಕಳಿಂಗ - ಪಾಂಡ್ಯ - ಕೇರಳ - ಕಾಂಭೋಜ - ಹಿಮಾಲಯ - ಕಾಮರೂಪ - ಪ್ರಾಗ್ಜ್ಯೋತಿಷ - ಇಲ್ಲೆಲ್ಲ ವಿಜಯ ಯಾತ್ರೆ ನಡೆಸಿದ - ಎಂಬ ಉಲ್ಲೇಖ ಇದೆ. ಈ ರಾಜ್ಯಗಳು ಭವ್ಯ ಭಾರತದ ಉತ್ತರ - ದಕ್ಷಿಣ, ಪೂರ್ವ - ಪಶ್ಚಿಮಗಳಲ್ಲೆಲ್ಲ ಹರಡಿ - ಹುಟ್ಟಿದ್ದು ವಿರಾಡ್ಭಾರತದ ಬೃಹತ್‌ಕಲ್ಪನೆಯನ್ನು ನಮ್ಮ ಮುಂದಿರಿಸುತ್ತವೆ. ಮಾತ್ರವಲ್ಲ, ಕಾಳಿದಾಸ ಈ ಪ್ರದೇಶಗಳ ಭೌಗೋಳಿಕ ಮಹತ್ವವನ್ನೂ, ವೈಶಿಷ್ಟ್ಯವನ್ನೂ ಸಹ ಸುಂದರವಾಗಿ ನಿರೂಪಿಸಿದ್ದಾನೆ. ದಕ್ಷಿಣದೇಶಗಳ ಯಾಲಕ್ಕಿ ಶ್ರೀಗಂಧಗಳ ಸುಗಂಧ, ಕೇರಳದ ವನಿತೆಯರ ಸಹಜ ಸೌಂದರ್ಯ, ಕಾಶ್ಮೀರದ ಕುಂಕುಮಕೇಸರಿ, ಕಾಂಭೋಜದ ಕುದುರೆಗಳು, ಹಿಮಾಲಯದ ಕಸ್ತೂರೀ ಮೃಗಗಳು - ಹೀಗೆ ಒಂದೊಂದನ್ನೂ ಪ್ರತ್ಯೇಕವಾಗಿ ವರ್ಣಿಸುತ್ತಾನೆ.

ರಘುವಂಶದ ಆರನೆಯ ಸರ್ಗವಂತೂ ವಿಶಾಲ ಭಾರತದ ಎಲ್ಲ ರಾಜರನ್ನೂ ಒಂದೆಡೆ ಕೂಡಿಸುವುದರಲ್ಲಿ ಸಫಲವಾಗಿದೆ. ವಿದರ್ಭರಾಜಕುಮಾರಿ ಇಂದುಮತಿಯ ಸ್ವಯಂವರ ಮಂಟಪ, ಅದು. ಸ್ವಯಂವರ ಮಾಲೆ ಹಿಡಿದ ಅಪೂರ್ವ ಸುಂದರಿ ಇಂದುಮತಿ 'ಸಂಚಾರಿಣೀ ದೀಪಶಿಖೆ'ಯಂತೆ ಸಭೆಯಲ್ಲಿ ಸಾಲಾಗಿ ಕುಳಿತಿದ್ದ ಒಬ್ಬೊಬ್ಬ ರಾಜನನ್ನೂ ಸೂಕ್ಷ್ಮವಾಗಿ ವೀಕ್ಷಿಸುತ್ತಾ ತೆರಳುತ್ತಿದ್ದಾಳೆ. ಸಖಿ ಸುನಂದೆ ಒಬ್ಬೊಬ್ಬನ ವಿಶೇಷತೆಯನ್ನೂ ಹೇಳುತ್ತಾ ಪರಿಚಯಿಸುತ್ತಾಳೆ. ಮಗಧ - ಅಂಗ - ಅವಂತಿ - ಅನೂಪ - ಶೂರಸೇನ - ಕಳಿಂಗ - ಪಾಂಡ್ಯ - ಹೀಗೆ ಅಖಂಡಭಾರತದ ದೊರೆಗಳೆಲ್ಲ ಅಲ್ಲಿ ಸಿಂಹಾಸನವೇರಿ ಕುಳಿತಿದ್ದಾರೆ. ಅವರನ್ನೆಲ್ಲ ಒಂದೆಡೆ ನೋಡುವುದೇ ಕಣ್ಣಿಗೆ ಹಬ್ಬ. ಅವರ ಬಗೆ - ಬಗೆಯ ವೇಷ ಭೂಷಣ, ವಿವಿಧ ಹವ್ಯಾಸ, ತರ - ತರದ ಮನೋಭಾವ - ಇವುಗಳನ್ನು ಕವಿ 'ಭಿನ್ನರುಚಿರ್ಹಿ ಲೋಕಃ' ಎಂದು ವರ್ಣಿಸಿ ಇಂದುಮತಿಯ ಸ್ವಯಂವರ ನೆಪದಲ್ಲಿ ಅವರೆಲ್ಲ ಒಗ್ಗೂಡಿಸಿ ಅಖಂಡಭಾರತದ ಕಲ್ಪನೆಯನ್ನು ನಮ್ಮ ಕಣ್ಣೆದುರಿಗೆ ಇರಿಸುತ್ತಾನೆ, ಕಾಳಿದಾಸ. ಮಾಲವಿಕಾಗ್ನಿಮಿತ್ರ ನಾಟಕದಲ್ಲಿ ಬರುವ ಅಶ್ವಮೇಧದ ಕಲ್ಪನೆ, ಯಜ್ಞಾಶ್ವದ ರಕ್ಷಣೆಗೆ ಹೋದ ವಸುಮಿತ್ರ ಮತ್ತು ಅವನ ಒಡನಾಡಿಗಳ ದೇಶಸಂಚಾರ - ಮತ್ತೊಮ್ಮೆ ಈ ರಾಷ್ಟ್ರದ ಅಖಂಡತೆಯನ್ನು ಸೂಚಿಸುತ್ತದೆ.

ಪವಿತ್ರಭಾರತದ ಏಕತೆಯ ಈ ಕಲ್ಪನೆ ಸ್ಥಿರವಾಗಿ ನೆಲೆಗೊಳ್ಳಬೇಕಾದರೆ ಬುದ್ಧಿ ಮತ್ತು ಬಾಹುಗಳ ಏಕತೆ ಸಿದ್ಧಿಸಬೇಕು; ಅವುಗಳ ಸಹಯೋಗ ಆಗಬೇಕು - ಎಂದು ನಂಬಿದವ ಕಾಳಿದಾಸ. ಬ್ರಾಹ್ಮತೇಜಸ್ಸು ಮತ್ತು ಕ್ಷಾತ್ರಬಲಗಳ ಸಂಯೋಗದಿಂದ ಭಾರತ ವಿಶ್ವದ ಅಗ್ರಗಣ್ಯ ರಾಷ್ಟ್ರಗಳ ಸಾಲಿನಲ್ಲಿ ಮೊದಲಸ್ಥಾನವನ್ನು ಪಡೆಯಬಲ್ಲುದು - ಎಂಬ ಕಲ್ಪನೆ ಕಾಳಿದಾಸನದು. ಈ ತತ್ತ್ವ ಅವನ ರಘುವಂಶ ಮಹಾಕಾವ್ಯದಲ್ಲಿ ತುಂಬ ಸುಂದರವಾಗಿ ನಿರೂಪಿತವಾಗಿದೆ.

ಸ ಬಭೂವ ದುರಾಸದಃ ಪರೈಃ
ಗುರುಣಾಥರ್ವವಿದಾ ಕೃತಕ್ರಿಯಃ
ಪವನಾಗ್ನಿ ಸಮಾಗಮೋಹ್ಯಯಂ
ಸಹಿತಂ ಬ್ರಹ್ಮಯದಸ್ತ್ರತೇಜಸಾ

ಅಥರ್ವವೇದವನ್ನು ಚೆನ್ನಾಗಿ ತಿಳಿದ ಗುರು ವಶಿಷ್ಠನಿಂದ ಸಂಸ್ಕಾರಹೊಂದಿದವನಾದ್ದರಿಂದ, ಅವನು ಶತ್ರುಗಳಿಗೆ ದುರ್ಜಯನಾದನು. ಶಸ್ತ್ರದಿಂದ ಯುಕ್ತವಾದ ಬ್ರಹ್ಮತೇಜಸ್ಸು, ಗಾಳಿಯಿಂದ ಕೂಡಿದ

ದೆಂಕಿಯಂತೆ ಜ್ವಲಿಸುತ್ತದೆ - ಎಂಬುದು ಇದರ ಅರ್ಥ.

ಭಾರತ ಒಂದೇ ರಾಷ್ಟ್ರವಾಗಿ ಉಳಿಯಬೇಕಾದರೆ, ಅದರ ಏಕತೆ ಮತ್ತು ಸಮಗ್ರತೆಯನ್ನು ಕಾಪಾಡಿಕೊಳ್ಳಬೇಕಾದರೆ ಈ ದೇಶವನ್ನು ಆಳುವವರ ಪರೋಪಕಾರಭಾವನೆ, ವಿಶಾಲಮನೋಭಾವ, ಸಂಕುಚಿತೆಯನ್ನು ಮೀರಿ ನಿಲ್ಲುವ ಸಮಗ್ರತೆ - ಇವೆಲ್ಲ ಅತಿಮುಖ್ಯ ಎಂದು ನಂಬಿದವ ಕಾಳಿದಾಸ. ಮಹಾರಾಜನಾದ ಅಜನನ್ನು ವರ್ಣಿಸುವ ಸಂದರ್ಭದಲ್ಲಿ ಕಾಳಿದಾಸ ಹೇಳುತ್ತಾನೆ : ಕೇವಲ ಅವನ ಸಂಪತ್ತು ಮಾತ್ರ ಇತರರ ಉಪಕಾರಕ್ಕಾಗಿ ಇರದೆ, ಅವನ ಸಮಸ್ತ ಸದ್ಗುಣಗಳೂ ರಾಜ್ಯದ ಎಲ್ಲ ಪ್ರಜೆಗಳ ಕಲ್ಯಾಣಕ್ಕಾಗಿಯೇ ಇದ್ದುವು. ಅವನ ಶಕ್ತಿಯಾದರೋ ಈ ರಾಷ್ಟ್ರದಲ್ಲಿ ದುಃಖಿತರಾದವರನ್ನು ಅವರ ದುಃಖ ಮತ್ತು ಭಯದಿಂದ ಮುಕ್ತರನ್ನಾಗಿಸುವುದಕ್ಕಾಗಿ; ಅವನ ಶಾಸ್ತ್ರಾಧ್ಯಯನ ವಾದರೋ ವಿದ್ವಾಂಸರನ್ನು ಸತ್ಕಾರಮಾಡಿ, ಆದರಿಸುವುದರಲ್ಲಿ ಸಾರ್ಥಕತೆ ಪಡೆಯುತ್ತಿತ್ತು.

ಬಲಮಾರ್ತ ಭಯೋಪಶಾಂತಯೇ
ವಿದುಷಾಂ ಸತ್ಕೃತಯೇ ಬಹುಶ್ರುತಂ
ವಸು ತಸ್ಯ ವಿಭೋರ್ನ ಕೇವಲಂ
ಗುಣವತ್ತಾಪಿ ಪರಪ್ರಯೋಜನಾ

ಪ್ರತಾಪಶಾಲಿಯಾದ ಅಜನ ಬಲವು ದುಃಖಿಗಳ ದುಃಖವನ್ನು ನಿವಾರಿಸುವುದಕ್ಕಾಗಿಯೂ, ಜ್ಞಾನವು ವಿದ್ವಾಂಸರನ್ನು ಸತ್ಕರಿಸುವುದಕ್ಕಾಗಿಯೂ ಇದ್ದಿತು. ಅವನ ಐಶ್ವರ್ಯ ಮಾತ್ರವಲ್ಲದೆ ಗುಣಗಳೂ ಸಹ ಇತರರ ಉಪಕಾರಕ್ಕಾಗಿಯೇ ಇದ್ದುವು - ಎನ್ನುತ್ತಾನೆ, ಕಾಳಿದಾಸ. ರಾಜನ ಸಾರ್ಥಕ್ಯ ರಾಷ್ಟ್ರದ ಪ್ರಜೆಗಳ ಪಾಲನೆಯಲ್ಲಿ; 'ರಾಜಾ ಪ್ರಕೃತಿ ರಂಜನಾತ್' ಎಂಬುದು ಪ್ರಾಚೀನ ಭಾರತದ ರಾಜನೀತಿಯ ಆದರ್ಶವಾಕ್ಯ. ಪ್ರಜೆಗಳ ರಂಜನೆಯೇ ನಮ್ಮ ಶಾಸಕರ ಪ್ರಧಾನ ಲಕ್ಷ್ಯವಾಗಬೇಕು. ರಾಜನ ವಿಷಯದಲ್ಲಿ ಭಕ್ತಿ ಮತ್ತು ತಮ್ಮ ವ್ಯಕ್ತಿಗತವಾದ ಸ್ವಾತಂತ್ರ್ಯ ರಕ್ಷಣೆಯೇ ಪ್ರಜೆಗಳ ಕರ್ತವ್ಯವಾಗಬೇಕು - ಹಾಗಾದಾಗ ಮಾತ್ರ ಭಾರತದ ಸಮಗ್ರತೆ ಉಳಿದೀತು - ಎಂಬುದು ಕಾಳಿದಾಸನ ಸ್ಪಷ್ಟ ಅಭಿಪ್ರಾಯ.

ತ್ಯಾಗ ಮತ್ತು ತಪೋವನಗಳಿಂದ ಭಾರತದ ಏಕತೆ ಉಳಿಯುತ್ತದೆ; ತ್ಯಾಗದ ಮಹತ್ವವು ಶಿಥಿಲವಾದಾಗ ಹಾಗೂ ತಪೋವನದ ವಿಷಯದಲ್ಲಿನ ಶ್ರದ್ಧೆಯು ಕಡಿಮೆಯಾದಾಗ ನಮ್ಮ ಸಾಂಸ್ಕೃತಿಕ ಏಕತೆ ಉಳಿಯುವುದಿಲ್ಲ - ಎಂಬುದು ಕಾಳಿದಾಸನ ದೃಢವಾದ ನಂಬಿಕೆ. ಆರ್ಯಸಂಸ್ಕೃತಿಯ ಮೂಲವೇ ತ್ಯಾಗ ಮತ್ತು ತಪೋವನ. ಅಖಂಡಭಾರತದ ಸಂರಕ್ಷಕನಾದ ರಘುಮಹಾರಾಜನ ಜನನದ ಕಾರಣವು ನಗರದಿಂದ ಬಹುದೂರವಾದ ವಶಿಷ್ಠರ ಪವಿತ್ರತಪೋವನದ ವಾಸ ಹಾಗೂ ಗೋಸೇವೆ. ಅಂತೆಯೇ ದುಷ್ಯಂತನ ಮಗನಾದ ಭರತನ ಜನನ ಹಾಗೂ ಪಾಲನೆಯು ಹೇಮಕೂಟಪರ್ವತದಲ್ಲಿನ ಮಾರೀಚಾಶ್ರಮದಲ್ಲಿ. 'ಶಮಪ್ರಧಾನೇಷು ತಪೋಧನೇಷು ಗೂಢಂ ಹಿ ದಾಹಾತ್ಮಕಮಸ್ತಿ ತೇಜಃ' - ಶಮಪ್ರಧಾನರಾದ ತಪಸ್ವಿಗಳು ನಿಗ್ರಹಾನುಗ್ರಹ ಸಮರ್ಥರು. ತಪಸ್ಸೆಂಬುದು ಭಾರತೀಯ ಸಂಸ್ಕೃತಿಯ ಮೂಲ ಮಂತ್ರ. ಇದರ ಸಾಧನೆಯಿಂದ ಮಾನವನು ತನ್ನ ಸಮಸ್ತ ಅಭಿಲಾಷೆಗಳನ್ನು ಮಾತ್ರವಲ್ಲದೆ, ಪರೋಪಕಾರ ಮಾಡುವ ಯೋಗ್ಯತೆಯನ್ನೂ ಹೊಂದುತ್ತಾನೆ. ಪಾರ್ವತಿ ಶಿವನನ್ನು ಪಡೆದದ್ದು ತಪಸ್ಸಿನಿಂದ; ಪತಿತ್ಯಕ್ತೆಯಾದ ಶಕುಂತಲೆ ದುಷ್ಯಂತನನ್ನು ಮತ್ತೆ ಪಡೆಯುವುದೂ ತಪೋಮಯವಾದ ಜೀವನದಿಂದಲೇ. ಭಾರತದ ಅಭಿವೃದ್ಧಿ, ಏಕತೆ, ಸಮಗ್ರತೆ - ಇವೆಲ್ಲ ತಪೋವನ ಮತ್ತು ತ್ಯಾಗದಿಂದಲೇ ಎಂಬುದು ಕಾಳಿದಾಸನ ಅಚಲವಿಶ್ವಾಸ.

ಶಾಕುಂತಲ ನಾಟಕದ ಕೊನೆಯಲ್ಲಿ ಕಾಳಿದಾಸ ನೀಡುವ ಅಮರ ಸಂದೇಶ ರಾಷ್ಟ್ರದ ಏಕತೆಯನ್ನು ಸಾಧಿಸುವವರಿಗೆ ಹೇಳುವ ಕವಿಮಾತು :

ಪ್ರವರ್ತತಾಂ ಪ್ರಕೃತಿ ಹಿತಾಯ
ಪಾರ್ಥಿವಃ ಸರಸ್ವತೀ ಶ್ರುತಿಮಹತೀ
ಮಹೀಯತಾಂ, ಮಮಾಪಿ ಚ ಕ್ಷಪಯತು
ನೀಲಲೋಹಿತಃ ಪುನರ್ಭವಂ ಪರಿಗತ
ಶಕ್ತಿರಾತ್ಮಭೂಃ

ಅಂದರೆ ಈ ರಾಷ್ಟ್ರವನ್ನು ಮುನ್ನಡೆಸುವವರು ತಮ್ಮ ಸ್ವಾರ್ಥದ ಸಂಕುಚಿತ ಮನೋಭಾವಗಳನ್ನು ಬಿಟ್ಟು ಸಮಗ್ರರಾಷ್ಟ್ರದ ಹಿತಚಿಂತನೆಯಲ್ಲಿ ಮಗ್ನರಾಗಲಿ. ಶಾಸ್ತ್ರಗಳ ಅಧ್ಯಯನದಿಂದ ಮಹತ್ವ ಶಾಲಿಯಾದ ವಿದ್ವಾಂಸರ ವಾಣಿಯು ಈ ರಾಷ್ಟ್ರದಾದ್ಯಂತದೊಳಗಲಿ; ಶಕ್ತಿ ಸಂಪನ್ನನಾದ ಭಗವಾನ್ ಶಂಕರನು ಸಮಸ್ತ ಜೀವಕೋಟಿಗೂ ಪುನರ್ಜನ್ಮವನ್ನು ದೂರಮಾಡಲಿ ಎನ್ನುತ್ತಾನೆ ಕಾಳಿದಾಸ. ಇದಕ್ಕಿಂತ ಸುಂದರವಾದ ರಾಷ್ಟ್ರೀಯ ಏಕತೆಯ ಸಂದೇಶ ಮತ್ತೊಂದಿಲ್ಲ.

ಹೀಗೆ ರಾಷ್ಟ್ರಕವಿ ಕಾಳಿದಾಸರ ಕೃತಿಗಳಲ್ಲಿ ನಾವು ಕಾಣುವುದು ರಾಷ್ಟ್ರೀಯ ಏಕತೆಯ ಸಂದೇಶವನ್ನು; ಅನೇಕತೆಯ ಹಾಸುಹೊಕ್ಕಿರುವ ಈ ಏಕತೆ ಇಡೀ ದೇಶವನ್ನು ಒಗ್ಗೂಡಿಸುವ ಶಕ್ತಿ; ಭಾರತೀಯರೆಲ್ಲರ ತಾರಕ ಮಂತ್ರ.

☆☆☆☆☆☆☆

# ನಮ್ಮ ಹಬ್ಬಗಳು

---ಸಿ. ಗೋವಿಂದಾಚಾರ್.

ಭಗವತ್ಪ್ರೀತ್ಯರ್ಥ ಎಂಬ ನೆವದಲ್ಲಿ ಉಂಡು ಸುಖ ಪಡುವುದೇ ಹಬ್ಬ. ಇದರಿಂದ ಇಹಪರಗಳೆರಡರಲ್ಲೂ ಆನಂದಪ್ರಾಪ್ತವಾಗುವುದು ಎಂಬ ನಂಬಿಕೆ ಎಲ್ಲರಲ್ಲೂ ಇದೆ. ಯಶಸ್ಸುಗಳಿಸುವುದು, ದೀರ್ಘಾಯುವಾಗಿರುವುದು ಮತ್ತು ಹಿಂದಿನ ಕಹಿಪ್ರಸಂಗಗಳನ್ನು ಮರೆಯುವುದು ಹಬ್ಬದ ಆಚರಣೆಯ ಧ್ಯೇಯಗಳಾಗಿರುತ್ತೆ. ಸನಾತನ ಹಿಂದೂಧರ್ಮ ಎಷ್ಟು ಹಳೆಯದೋ ಹಬ್ಬಗಳೂ ಅಷ್ಟೇ ಹಳೆಯವು. ಇಷ್ಟದೈವಗಳ ಪೂಜೆ, ಮತಧರ್ಮಗಳ ಹುಟ್ಟು, ಭಕ್ತಿಮಾರ್ಗದ ಚಳುವಳಿ ಸಂಪ್ರದಾಯ ಪದ್ಧತಿಗಳು ಹಬ್ಬಗಳಿಗೆ ಹೊಸ ತಿರುವನ್ನು ಕೊಟ್ಟುವು. ಮೂರ್ತಿಗಳ ಸಂಖ್ಯೆ ಹೆಚ್ಚಿದಂತೆಲ್ಲಾ ಹಬ್ಬಗಳ ಸಂಖ್ಯೆಯೂ ಹೆಚ್ಚಿತು. ವಿವಿಧ ದೇವತೆಗಳಿಗಾಗಿ ಕೊಡುವ ನೈವೇದ್ಯ ವ್ರತನಿಯಮ ಆಚರಣೆಗಳಲ್ಲಿವಿವಿಧ ಹಬ್ಬಗಳು ಗೋಚರವಾಯಿತು. ಒಬ್ಬ ಭಕ್ತನು ಸುದರ್ಶನ ಹೋಮ ಮಾಡಿಸಿ ಕದಂಬ, ಸಕ್ಕರೆ ಪೊಂಗಲ್ ನಿವೇದಿಸಿ ಉಂಡು ತೃಪ್ತಿಪಟ್ಟನೆ, ಇನ್ನೊಬ್ಬ ಗಣಪತಿಗೆ ಲಕ್ಷಮೋದಕ ಹೋಮ, ಮತ್ತೊಬ್ಬ ಶ್ರೀಸೂಕ್ತ ಹೋಮ ಮಗದೊಬ್ಬ ಶ್ರೀರಾಮ ಪಟ್ಟಾಭಿಷೇಕ ಮಾಡಿಸುವನು. ಪ್ರತಿಯೊಂದು ಹಬ್ಬಕ್ಕೆ ಅಧಿದೇವತೆ ಇದೆ. ಮಾತೃ ಪೂಜೆಯನ್ನು ಪ್ರತಿಬಿಂಬಿಸುವ ಮಹಾಲಕ್ಷ್ಮಿ ಮಹಾಸರಸ್ವತಿ ಹಾಗು ಮಹಾಶಕ್ತಿ ನವರಾತ್ರಿ ಹಬ್ಬದ ಅಧಿದೇವತೆಗಳು "ವಿರೋಚನ ಸುತ ಬಲಿರಾಜ ನಮೋ ನಮಃ" ಎಂದು ಬಲಿಚಕ್ರವರ್ತಿಯನ್ನು ಕೊಂಡಾಡುವ ಹಬ್ಬ ಬಲಿಪಾಡ್ಯಮಿ. ಜ್ಞಾನ, ವಿದ್ಯಾಬುದ್ಧಿ ಸಂಪತ್ತಿಗಾಗಿ ಹಯಗ್ರೀವ, ಸರಸ್ವತಿ, ಗಣಪತಿ ಮುಂತಾದ ವಿದ್ಯಾದೇವತೆಗಳು, ವಿವಿಧ ಐಶ್ವರ್ಯ ಪ್ರಾಪ್ತಿಗಾಗಿ ಅಷ್ಟಲಕ್ಷ್ಮಿದೇವತೆಗಳಿವೆ.

ಹಬ್ಬಗಳ ಹಿನ್ನೆಲೆಯಲ್ಲಿ - (ಎ) ಶುಭ ಅಥವ ಕಲ್ಯಾಣ ಎಂಬ ಪವಿತ್ರ ಭಾವನೆ ಇದೆ. ಹಬ್ಬಗಳಿಗೂ ಪಾಪ - ಪುಣ್ಯಗಳಿಗೂ ನಂಟಿದೆ. ಹಬ್ಬಗಳು ಅದರಲ್ಲೂ ವ್ರತಗಳು ಯಾವಕಾರಣಕ್ಕೂ ನಿಲ್ಲಕೂಡದು ಎಂಬ ದೃಢನಂಬಿಕೆ ಹಾಗೂ ಭಯ ಇದೆ. (ಬಿ) ನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ತತ್ತ್ವಗಳಿವೆ ಸಂಪ್ರದಾಯಗಳಿವೆ. ಉದಾ : ಜೀವನದಲ್ಲಿ ಸುಖದುಃಖಗಳೆರಡನ್ನೂ ಸಮನಾಗಿ ಕಾಣಬೇಕೆಂದು ಉಗಾದಿಯಂದು ಬೇವು - ಬೆಲ್ಲ ಸೇವನೆಯ ಸಂಕೇತ, ನರಕ (ಅಜ್ಞಾನ) ವೆಂಬ ಅಂಧಕಾರ ತೊಲಗಿ ಜ್ಞಾನ, ಹರ್ಷ, ಉಲ್ಲಾಸದ ಬೆಳಕು ಚೆಲ್ಲಲಿ ಎಂಬುದು ದೀಪಾವಳಿ ಸಂಕೇತ. ಭೀಮನ ಮಾವಾಸ್ಯೆಯಂದು ಹೂರ್ಣದ ಜೊತೆಯಲ್ಲಿ ನಾಣ್ಯಗಳನ್ನಿಟ್ಟು ಕಡುಬನ್ನು ತಯಾರಿಸಿ ಕಿರಿಯ ಸೋದರನಿಂದ ಅದನ್ನು ಚೂರು ಮಾಡುವುದನ್ನು ಭಂಡಾರ ಒಡೆಯುವುದು ಎಂದು ಕರೆಯುವರು. ಮಳೆಗಾಲದಲ್ಲಿ ನೆಲದಲ್ಲಿರುವ ಹುಳುಕೀಟಗಳು ಹಾವು ಹೊರಗೆ ಬರುತ್ತವೆ. ಅವುಗಳಿಗೆ ಹಾನಿಯಾಗದಿರಲೆಂದು ಮಾನವ ಸಂಚಾರ ಹಾಗೂ ಮಾತಾಡುವುದನ್ನು ಸ್ಥಗಿತಗೊಳಿಸಲು ಯತಿಗಳು ಚಾತುರ್ಮಾಸ್ಯ ಸಂಕಲ್ಪಮಾಡಿ ಲೋಕಕ್ಕೆ ಮಾರ್ಗದರ್ಶಕರಾಗಿರುತ್ತಾರೆ. ಉಗಾದಿಯಂದು ಸಂಜೆ ಪಂಚಾಂಗ ಶ್ರವಣ, ಪ್ರತಿ ಹಬ್ಬಗಳಲ್ಲಿ ದೇವಸ್ಥಾನಕ್ಕೆ ಹೋಗುವುದು, ಹಿರಿಯರ ಆಶೀರ್ವಾದ ಪಡೆಯುವುದು, ಬಂಧು ಮಿತ್ರರನ್ನು ಭೇಟಿಮಾಡುವುದು ಶುಭಕೋರುವುದು, ಸಕಲರಿಗೂ ನಾವು ಪ್ರಿಯರಾಗಿರಬೇಕೆಂದು ಸಿಹಿ ಹಂಚುವುದು ಸಾಂಪ್ರದಾಯಿಕವಾಗಿ ಬಂದಿರುತ್ತೆ. ಈ ದಿಸೆಯಲ್ಲಿ ಜನರ ಆಡಿಕೆ ಅನಿಸಿಕೆಗಳು ಗಮನಾರ್ಹ :- (೧) ಯುಗ ಯುಗಾದಿ ಕಳೆದರೂ ಯುಗಾದಿ ಮರಳಿಬರುತಿದೆ. (೨) ಉಂಡದ್ದೇ ಉಗಾದಿ ಮಿಂದದ್ದೇ ದೀಪಾವಳಿ. (೩) ಎಳ್ಳು ತಿಂದು ಒಳ್ಳೆಮಾತಾಡು. (೪) ಶಿವರಾತ್ರಿ ಬಂತು, ಛಳಿ ಶಿವಶಿವ ಎಂದು ಓಡಿಹೋಯಿತು. (೫) ಕಲ್ಯಾಣಮೋ ಕಾರ್ತಿಯೋ, (ಶ್ರೀ ವೈಷ್ಣವರಿಗೆ ಕಾರ್ತಿ ಹಬ್ಬ (ಆನೆಹಬ್ಬ) ಎರಡನೆ ದೊಡ್ಡಹಬ್ಬ

## ವ್ಯಾಪಕ ಹಬ್ಬಗಳು :

ಭಾರತೀಯ ಹಬ್ಬಗಳು ಅನೇಕವಾಗಿ ವ್ಯಾಪಕವಾದ್ದು. ಈ ವ್ಯಾಪ್ತಿಯಲ್ಲಿ (ಎ) ಸರ್ವತ್ರ, (ಬಿ) ಮತಧರ್ಮಗಳಿಗೆ, (ಸಿ) ರಾಷ್ಟ್ರಕ್ಕೆ ಮಹಾತ್ಮರು ಹಾಗೂ ವ್ಯಕ್ತಿಗೆ ಸಂಬಂಧಿಸಿದ ಹಬ್ಬಗಳಿವೆ, (ಡಿ) ವ್ರತಗಳಿವೆ. ಉಗಾದಿ ಹಾಗೂ ದೀಪಾವಳಿ ಸರ್ವವ್ಯಾಪಕ ಹಬ್ಬಗಳಾಗಿವೆ. ಮುಂಬರುವ ಹಬ್ಬಗಳಿಗೆ ಉಗಾದಿ ಪ್ರಮುಖವಾಗಿರುವುದರಿಂದ ಇದನ್ನು 'ಹಬ್ಬಗಳ ಹಬ್ಬ' ಎಂದು ಕರೆಯುವರು. ದಕ್ಷಿಣ ಕನ್ನಡದಲ್ಲಿ ಗುಡಿಪಾಡ್ಯ ಕೇರಳದಲ್ಲಿ 'ವಿಷು', ತಮಿಳುನಾಡಿನಲ್ಲಿ 'ಚಿತ್ರ ವಿಶು' (ಸೌರಮಾನ ಉಗಾದಿ) ಎಂದು ಹಬ್ಬ ಹಬ್ಬಗಳ ರಾಜ, ಹೊಸ ಅಳಿಯದೇವರ 'ತಲೈದೀಪಾವಳಿ' ಎಂದು ಹೆಸರುವಾಸಿಯಾಗಿರುವ ದೀಪಾವಳಿ ವಿವಿಧ ರೀತಿಯಲ್ಲಿ ಸುಖತರುವ ಹಬ್ಬವಾಗಿದೆ. ಹಗಲು-ರಾತ್ರಿಗಳ ಈ ಹಬ್ಬವನ್ನು ಸಾಲಾಗಿ ೩-೪ ದಿನಗಳವರೆಗೂ ಆಚರಿಸಲಾಗುವುದು. ತ್ರಯೋದಶಿಯಂದು ನೀರುತುಂಬುವುದು. ಚತುರ್ದಶಿಯಂದು ಬೆಳಗಿನ ಜಾವ ಅಭ್ಯಂಜನ ಸ್ನಾನ, ಪಟಾಕಿಬಾಣ ಬಿರುಸುಗಳ ಉಡಾವಣೆ, ಮಧ್ಯಾಹ್ನ ಭಾರಿ ಊಟ, ಅಮಾವಾಸ್ಯೆಯಂದು ಪಿತೃತರ್ಪಣ, ಧನಲಕ್ಷ್ಮಿಪೂಜೆ, ಪಾಡ್ಯದಂದು ಬಲೀಂದ್ರ ಪೂಜೆ ಇತ್ಯಾದಿ. ರೈತರು ಧಾನ್ಯರಾಶಿಯನ್ನೇ ಪೂಜಿಸುವರು. ಕೃಷಿ ಉಪಕರಣಗಳನ್ನು ಸ್ವಚ್ಛಗೊಳಿಸಿ ಅವಕ್ಕೆ ವಿಶ್ರಾಂತಿ ಕೊಡುವರು. ಉಗಾದಿಯ ನಂತರ ಬರುವ ರಾಮನವಮಿಯನ್ನು ವಸಂತನವರಾತ್ರಿ ಎಂದು ಕರೆಯುವರು. ದಕ್ಷಿಣದೇಶದ ಅನೇಕ ಕಡೆಗಳಲ್ಲಿ ಗರ್ಭ ನವಮಿ ಆಚಾರಣೆಯಲ್ಲಿದೆ. ರಾಮ, ಕೃಷ್ಣ, ಶಿವ ಉತ್ತರ ಭಾರತದವರ ನೆಚ್ಚಿನ ದೈವಗಳು. ಕೃಷ್ಣಜಯಂತಿ - ಅಷ್ಟಮಿ ಇಡೀ ದಕ್ಷಿಣ ಭಾರತ, ಹಾಗೂ ರಾಜಾಸ್ಥಾನ್, ಗುಜರಾತ್, ಉ. ಪ್ರದೇಶ ಒರಿಸ್ಸಾ ರಾಜ್ಯಗಳಲ್ಲಿ ವೈಭವದ ಹಬ್ಬವಾಗಿರುತ್ತೆ. ಮಹಾರಾಷ್ಟ್ರಕ್ಕೆ ವಿನಾಯಕ ಚೌತಿ ನಾಡ ಹಬ್ಬವೇ ಆಗಿದೆ. ಲೋಕ ಮಾನ್ಯ ತಿಲಕರು, ಇದರ ಖ್ಯಾತಿಗೆ ಕಾರಣರಾಗಿದ್ದಾರೆ. ಸಂಗೀತ ನೃತ್ಯಕಲಾಪ್ರದರ್ಶನ, ಉಪನ್ಯಾಸ ಮಾಲೆ ಹಾಗೂ ವೈಭವದ ವಿಸರ್ಜನೋತ್ಸವ ಇದು ಸರ್ವಜನಾದರಣೆಯವಾಗಿರುತ್ತೆ. ಕುಲಶೇಖರಾಳ್ವಾರರು ರಾಮನವಮಿ ನಾಡಹಬ್ಬವಾಗಬೇಕೆಂದು ಆಸೆಪಟ್ಟರು. ಬಲಿಚಕ್ರವರ್ತಿಯನ್ನು ಕುರಿತ ಹಬ್ಬಗಳ ಸಾರ್ವತ್ರಿಕ ರಜಾ ಘೋಷಿಸಲಾಗುವುದು ಹಾಗೂ ಎಲ್ಲ ಕೋಮಿನವರು ಈ ಹಬ್ಬವನ್ನ ಆಚರಿಸುವರು. ನೃತ್ಯ ಕೋಲಾಟ, ನಾಟಕ ದಿವ್ಯಕ್ಷೇತ್ರಗಳಲ್ಲಿ ದೀಪಾಲಂಕಾರ ಈ ಹಬ್ಬದ ಪ್ರಮುಖ ಆಕರ್ಷಣೆಗಳಾಗಿರುತ್ತೆ.

ಹಗಲು-ರಾತ್ರಿಗಳ ಹಬ್ಬವಾದ ದಸರ ಕರ್ನಾಟಕದ ನಾಡಹಬ್ಬ, ಇದರ ಹಿನ್ನೆಲೆಯಲ್ಲಿ ಅದ್ಭುತ ಇತಿಹಾಸವಿದೆ. ಅರಮನೆಯಲ್ಲಿ ನಡೆಯುವ ದರ್ಬಾರ್ ದೀಪಾಲಂಕಾರ ಆಯುಧಪೂಜೆ, ವಿಜಯದಶಮಿ, ವಸ್ತು ಪ್ರದರ್ಶನ, ಮನೆಗಳಲ್ಲಿ ಬೊಂಬೆಕೂಡಿಸುವುದು, ಕನ್ಯೆಯರ ಸಡಗರ ಸಂಭ್ರಮ, ಶೃಂಗೇರಿಯಲ್ಲಿ ಶರನ್ನವರಾತ್ರಿ ಚಾಮುಂಡೇಶ್ವರಿಗೆ ವಿಶೇಷಪೂಜೆ, ಅಮ್ಮನವರ ದೇವಸ್ಥಾನಗಳಲ್ಲಿ ವೀಳೆ, ಅಡಿಕೆ, ಬೆಣ್ಣೆ, ಹಣ್ಣು, ತರಕಾರಿ, ಅರಿಶಿನ, ಕುಂಕುಮ ನಾಣ್ಯಗಳು ಮುಂತಾದ ಒಂಬತ್ತು ಹಬ್ಬದ ಪ್ರಮುಖ ಆಕರ್ಷಣೆ. ಮಹಾಲಯ ಅಮಾವಾಸ್ಯೆಯಂದು ಎಲ್ಲ ಕೋಮಿನವರು 'ಪಕ್ಷ'ವನ್ನಾಚರಿಸುವರು. ಮಲೆನಾ

ಡಿಸ ರೈತರು ಆಶ್ವಯುಜ ಹುಣ್ಣಿಮೆಯನ್ನು 'ಸೀಗೆ ಹುಣ್ಣಿಮೆ' ಎಂದು ಜಮೀನನ್ನು ಪೂಜಿಸಿ ಭೂಮದೂಟವನ್ನು ಮಾಡುವರು. ೧೨ ಸಂಕ್ರಮಣ ಪುಣ್ಯ ದಿನಗಳ ಪೈಕಿ ಮಕರ ಸಂಕ್ರಾಂತಿ ಹೆಚ್ಚು ಪವಿತ್ರವಾದುದು. ಕರ್ನಾಟಕ ತಮಿಳುನಾಡಿನಲ್ಲಿ ಪೊಂಗಲ್ ಎಂದು ಮೂರು ದಿವಸಗಳು, ಆಂಧ್ರದಲ್ಲಿ ಪೆದ್ದ ಪಂಡುಗ ಎಂದು, ದೇಶದಾದ್ಯಂತ ಉತ್ತರಾಯಣ ಪುಣ್ಯಕಾಲ ಎಂದು ಆಚರಿಸಲಾಗುವುದು. ಕೇರಳಕ್ಕಂತೂ 'ಮಕರ ವಿಳಕ್ಕು' ಎಂದು ದೊಡ್ಡ ಹಬ್ಬವಾಗಿರುತ್ತೆ. ಕೃಷಿಕರಿಗೆ ಭಕ್ತ ಕಬ್ಬು ಬೆಳೆಯ ಸಮೃದ್ಧಿಯನ್ನು ತರುವ ಹಬ್ಬವಿದು. ಸಮುದ್ರಸ್ನಾನ ಸಂಕ್ರಮಣ ತರ್ಪಣ, ಎಳ್ಳುಬೀರುವುದು, ಸಂಜೆ ಮಕ್ಕಳನ್ನು ಮಣೆಯಮೇಲೆ ಕೂರಿಸಿ ರಕ್ಷೆಗಾಗಿ ಎಲಚಿ ಹಣ್ಣು,ಕಾಸು, ಕಬ್ಬುಗಳನ್ನು ತಲೆಯ ಮೇಲೆ ಎರೆದು ಆರತಿ ತೆಗೆಯುವುದು, ರಾತ್ರಿ ದನಗಳಿಂದ 'ಕಿಚ್ಚು' ಹಾರಿಸುವುದು, ದನ, ಎತ್ತು ಎಮ್ಮೆಗಳ ಓಟ, ಅವುಗಳ ಜೊತೆ ವಿವಿಧ ಆಟ ಗಳು ಈ ಹಬ್ಬದ ಆಕರ್ಷಣೆ. ಸೂರ್ಯಪಥದಲ್ಲಿ ಬದಲಾವಣೆಯನ್ನು ಈ ಹಬ್ಬದಿಂದ ಗುರುತಿಸಬಹುದು.

ರಥಸಪ್ತಮಿಯೂ ಸಂಕ್ರಾಂತಿಯಂತೆ ಒಂದು ರೀತಿಯ ಸೂರ್ಯಪೂಜೆ, ಅನೇಕರೋಗಗಳು ಸೂರ್ಯನಿಂದ ಪರಿಹಾರ (ವಿಟಮಿನ್ 'ಡಿ') ವಾಗುವುದರಿಂದ ಇದು ಆರೋಗ್ಯವರ್ಧಕವೆಂದೂ, ಶುಭದಿನಗಳಲ್ಲಿ ರಥಸಪ್ತಮಿ ಎರಡನೆಯದು (ವಿಜಯದಶಮಿ ಮೊದಲನೆಯದು) ಎಂದು ಅಭಿಪ್ರಾಯವಿದೆ. ದೇವಸ್ಥಾನಗಳಲ್ಲಿ ರಥಗಳ ಚಲನೆಯ ದಿಕ್ಕಿನಲ್ಲಿ ಬದಲಾವಣೆ ಇರುವುದು. ಶಿವರಾತ್ರಿಯನ್ನು ಹಬ್ಬವಾಗಿಯೂ ವ್ರತವಾಗಿಯೂ ಆಚರಿಸುವರು. ಶಿವಾಲಯಗಳಲ್ಲಿ ಅದರಲ್ಲೂ ದ್ವಾದಶ ಜ್ಯೋತಿರ್ಲಿಂಗ ಕ್ಷೇತ್ರಗಳಲ್ಲಿ ರುದ್ರಾಭಿಷೇಕ, ಹೋಮ, ವಿಶೇಷ ಬಿಲ್ವಾರ್ಚನೆ, ಶಿವಕಥೆ ಭಜನೆ ಜಾಗರಣೆ ಸಂತೆ ಮುಂತಾದ ಆಕರ್ಷಣೆಗಳಿರುತ್ತೆ.

## ವ್ರತಗಳು :

ಪಾಪಗಳನ್ನು ದೂರಮಾಡುವ ನಿಯಮ ನಿಬಂಧನೆಗಳು ಉಪವಾಸ ಹಾಗೂ ಪ್ರಾರ್ಥನೆಗಳನ್ನೊಳಗೊಂಡ ದೇವತಾರಾಧನೆ ವ್ರತವೆನಿಸಿಕೊಳ್ಳುವುದು. ಸ್ತ್ರೀ ಪುರುಷರಿಬ್ಬರಿಗೂ ಅಧಿಕಾರವಿದೆ. ಶ್ರಾವಣ ಮಾಸದಿಂದ ಹಬ್ಬ - ವ್ರತಗಳ ಸಾಲು ಆರಂಭವಾಗುವುದು. ಇವುಗಳಲ್ಲಿ 'ಗಂಡನ ಪೂಜೆ' ಎಂದು ಸುಮಂಗಲಿಯರಿಗೂ ಕನ್ನೆಯರಿಗೂ ಪ್ರಸಿದ್ಧವಾದ 'ಭೀಮನಮಾವಾಸ್ಯೆ' ಪ್ರಥಮವಾದುದು. ತಮಿಳು ನಾಡಿನಲ್ಲಿ ಆಡಿ ಅಮಾವಾಸ್ಯೆ ಸುಮಂಗಲಿ ಪೂಜ್ಯೆ ಎಂದು ಆಚರಿಸುವರು. ನಂತರ ಹಾವಿಗೆ ಸಂಬಂಧಿಸಿದ ನಾಗಚೌತಿ - ಪಂಚಮಿ - ಷಷ್ಠಿ, ವರಲಕ್ಷ್ಮಿ ಸ್ವರ್ಣಗೌರಿ ಅನಂತ ವ್ರತಗಳು ಸಾಲಾಗಿ ಬರುವುವು. ಪ್ರತಿ ವ್ರತಕ್ಕೂ ಒಂದು ನಿರ್ಧಿಷ್ಟವಾದ ಶಾಸ್ತ್ರ ವಿಧಿ ಇರುತ್ತೆ. ನೂತನ ದಂಪತಿಗಳಿಗಾಗಿ ಮಂಗಳ ಗೌರಿವ್ರತದಲ್ಲಿ ೧೬ ಬಗೆ ಪೂಜಾದ್ರವ್ಯಗಳು, ದೀಪಗಳು ಭಕ್ಷಭೋಜ್ಯಗಳಿರುತ್ತವೆ. ಅನಂತ ವ್ರತದಂದು ಅನಂತ ಪದ್ಮನಾಭನ ಸ್ವರೂಪವನ್ನು ಕಲ್ಪಿಸಿಕೊಂಡು ಮಂಡಲವನ್ನು ನಿರ್ಮಿಸಿ ತಾಮ್ರದ ಬಿಂದಿಗೆಯಲ್ಲಿ ಮಡಿ ನೀರು ತುಂಬಿ, ವಸ್ತ್ರಸುತ್ತಿ ದರ್ಭೆಯಿಂದ ಶೇಷ ರೂಪವನ್ನು ಮಾಡಿ ಕಲಶದ ಮೇಲಿಟ್ಟು ಷೋಡಶೋಪಚಾರಗಳಿಂದ ಪೂಜಿಸಿ ಕೆಂಪುದಾರಗಳನ್ನು ಕಟ್ಟಿಕೊಬೇಕು. ದೇವರು ಅಂದು ಹಲ್ಲುಗಳಿರದ ವೃದ್ಧನರೂಪದಲ್ಲಿ ಬರುವನೆಂದು ಭಾವಿಸಿ ಮೆತ್ತಗಿರುವ ಇಡ್ಲಿ, ಅದ್ರಸ (ಅತಿರಸ) ಮುಂತಾದ ಭಕ್ಷಗಳನ್ನು ನಿವೇದಿಸಿ ಭಾರಿದಕ್ಷಿಣೆ ವಸ್ತ್ರಗಳಿಂದ ದ್ವಿಜರನ್ನು ತೃಪ್ತಿಪಡಿಸುವರು. ಸ್ವರ್ಣಗೌರಿ ವ್ರತದಲ್ಲಿ ಮುತ್ತೈದೆಯರಿಗೆ ಮೊರದ ಬಾಗಿನ ಕೊಡುವರು ಹಾಗೂ ಹೋಳಿಗೆ ಭೋಜನವಿರುವುದು. ಪ್ರತಿತಿಂಗಳು ಸಂಕಷ್ಟ ಚತುರ್ಥಿ ಆಚರಿಸುವುದು ವಿನಾಯಕ ಆರಾಧನೆಯ ಇನ್ನೊಂದು ರೂಪವಾಗಿರುತ್ತೆ. ವರ್ತಮಾನ ದೃಷ್ಟಿಯಿಂದ ಹಾಗೂ ಗಣೇಶಗುಡಿಯ ಪ್ರಗತಿಗೆ ಈ ವ್ರತ ಬಹಳಷ್ಟು ಕಾರಣವಾಗಿದೆ. ಅಭೀಷ್ಟಗಳು ಈಡೇರುವ ಸಲುವಾಗಿ ಸತ್ಯನಾರಾಯಣ ಹಾಗೂ ವೈಭವ ಲಕ್ಷ್ಮಿವ್ರತಗಳಿವೆ. ಇಂಥಾ ವ್ರತಾಚಾರಣೆಗಳು ತಮಿಳುನಾಡು ಕೇರಳಗಳಲ್ಲಿ ಕಾಣಬರುವುದಿಲ್ಲ. ಸುಬ್ರಹ್ಮಣ್ಯ(ಮುರುಗ)ನಿಗೆ ಮಾಸಲಾದ ಆಡಿಕೃತ್ತಿಕೈಯಂದು ಕಾವಡಿ ಹೊತ್ತು ಭಕ್ತರು ವಿವಿಧ ರೀತಿಯ ಹರಕೆ ಸಲ್ಲಿಸುವರು. ಮಲೇಸಿಯಾದಲ್ಲಿಯೂ ಇದರ ಆಚರಣೆ ಇದೆ. ಆದರೆ ಸುಬ್ಬರಾಯಷಷ್ಠಿ ಬಗ್ಗೆ ತಮಿಳು ನಾಡಿನಲ್ಲಿ ವ್ರತಕಾಣಬರುವುದಿಲ್ಲ. ಈ ಎಲ್ಲ ವ್ರತಗಳಿಗೆ ನಾಂದಿಯಾಗಿರುವ ಏಕಾದಶಿ - ದ್ವಾದಶಿ ವ್ರತಗಳನ್ನು ಮಾಡದಿದ್ದರೆ ಇತರ ವ್ರತಗಳನ್ನು ಮಾಡಿದರೂ ಫಲವಿಲ್ಲ ಎಂದು ರಾಘವೇಂದ್ರ ಸ್ವಾಮಿಗಳು ಅಪ್ಪಣೆ ಕೊಡಿಸುವರು.

ಏಕಾದಶಿ ವ್ರತ ಎಲ್ಲರಿಗೂ ಉಂಟು. ನಿರ್ಜಲ ಉಪವಾಸ ಮಾಡುವವರನ್ನು ಬಿಟ್ಟು ಬೇರೆಯವರು ಆಹಾರ ಸೇವನೆಯಲ್ಲಿ ವ್ಯತ್ಯಾಸ ಮಾಡಿಕೊಂಡು ಫಲ ಆಹಾರವನ್ನೇ ಸೇವಿಸುವರು. ಇದು ಒಂದು ತಪ್ಪುಕಲ್ಪನೆಯ ಮೇಲೆ ರೂಢಮೂಲಗಳಿಂದ ಮನ್ನಣೆ ಪಡೆದಿರುತ್ತೆ.

ಮತ ಧರ್ಮಗಳಿಗೆ ಸಂಬಂಧಿಸಿದ ಹಬ್ಬಗಳನ್ನು ಸಾಂಪ್ರದಾಯಿಕವಾಗಿ ಆಚರಿಸಲಾಗುವುದು. ವೈದಿಕರಿಗೆ ಮಾಸಲಾದ ಹಬ್ಬಗಳು ಅನಾದಿಕಾಲದಿಂದಲೂ ಬಂದಿವೆ. ವಸಂತ ಪಂಚಮಿಯಂದು ವೇದಾಧ್ಯಯನ ಆರಂಭ, ಶ್ರಾವಣ ಪೌರ್ಣಮಿ ಉಪಾಕರ್ಮ, ಪ್ರಥಮೆಯಂದು ಎಲ್ಲರಿಗೂ ಗಾಯತ್ರಿ, ಮಹಾನವಮಿಯಂದು ಹಯಗ್ರೀವ ಪೂಜೆ (ಸರಸ್ವತಿ ಪೂಜೆ) ಇತ್ಯಾದಿ. ಈ ದಿನಗಳಲ್ಲಿ ಉತ್ತರ ಭಾರತದಲ್ಲಿ ಸೋದರ ಸೋದರಿಯರು ಪರಸ್ಪರ ಭೇಟಿಮಾಡಿ 'ರಾಖಿ' ಕಟ್ಟಿ ಶುಭ ಕೋರುವರು. ಉಡುಗೊರೆ ಸಿಹಿವಿತರಣೆ ಆಶೀರ್ವಾದಗಳು ಸಂಭ್ರಮದಿಂದ ಜರುಗುವುವು. ಶ್ರೀ ವೈಷ್ಣವರಿಗೆ ಕೃಷ್ಣಜಯಂತಿ, ಕಾರ್ತಿ, ಭೋಗಿ ಹಬ್ಬ, ತಿರುವಾಡಿಪ್ಪೂರಂ, ತಿರುಪ್ಪಾವೈ, ಪ್ರತಿ ದ್ವಾದಶಿ, ಕೈಶಿಕ, ಮುಕ್ಕೋಟಿ ದ್ವಾದಶಿ ಆಳ್ವಾರಾಚಾರ್ಯರ ತಿರುನಕ್ಷತ್ರಗಳು ಮಠಗಳ ಆರಾಧ್ಯಮೂರ್ತಿಗಳ ಜಯಂತಿ, ಅದ್ವೈತಿಗಳಿಗೆ ಶಂಕರ ಜಯಂತಿ, ಶರನ್ನವರಾತ್ರಿ ಶಿವರಾತ್ರಿ, ದ್ವೈತಿಗಳಿಗೆ ಮಧ್ವಜಯಂತಿ ನವಮಿ, ಪರಂಪರೆಯಲ್ಲಿ ವಿರಾಜಿಸುವ ತೀರ್ಥರುಗಳ ಜಯಂತಿ, ಕೃಷ್ಣಜಯಂತಿ, ಪರ್ಯಾಯೋತ್ಸವ ಇತ್ಯಾದಿ. ಸಂಕ್ರಾಂತಿ, ಉಗಾದಿ ದೀಪಾವಳಿ ಯಂಥಾ ಸರ್ವತ್ರ ಹಬ್ಬಗಳು ತ್ರಿಮತಸ್ಥರಿಗೂ ಉಂಟು. ಕಾಲಮಾನ, ಪಂಚಾಂಗ, ವಾರ ತಿಥಿ ನಕ್ಷತ್ರ ಪಕ್ಷ ದಿಕ್ಕುದೆಸೆ ಮುಂತಾದುವನ್ನು ಅನುಸರಿಸಿ ಮಾಡುವ ಹಬ್ಬಗಳು ನಮ್ಮವು. ಆರ್ಯರು ಇವುಗಳನ್ನು ವಿವಿಧ ಶಾಸ್ತ್ರಗಳಲ್ಲಿ ನಿರೂಪಿಸಿರುತ್ತಾರೆ. ಶ್ರೀ ವೈಷ್ಣವ ಮಠ ಆಶ್ರಮಗಳಲ್ಲಿ ವಾಕ್ಯಸಿದ್ಧಾಂತ, ಮುನಿತ್ರಯ, ಮನ್ನಾರ್ - ತೋಳಪ್ಪರ್ ಸಂಪ್ರದಾಯ ಪದ್ಧತಿಗಳಿಂದ ಹಬ್ಬಗಳ ಆಚರಣೆಯಲ್ಲಿ ಸ್ವಲ್ಪ ವ್ಯತ್ಯಾಸ ವಿರುವುದು. ಕ್ಷೇತ್ರಗಳ ವೈಭವೋತ್ಸವಗಳಲ್ಲಿ ಊರಿನವರು ಭಕ್ತ-ಭಾಗವತ ಯಾತ್ರಾರ್ಥಿಗಳನ್ನು ತಮ್ಮ ತಮ್ಮ ಮನೆಗೆ ಆಹ್ವಾನಿಸಿ ಹಬ್ಬದ ಊಟವನ್ನು ಮಾಡಿಸುವರು. ಇದೊಂದು ಪುಣ್ಯಕಾರ್ಯ ಎಂದು ಎಲ್ಲರ ಭಾವನೆ.

## ಭಕ್ಷ್ಯ - ಭೋಜ್ಯಗಳು :

ಶ್ರೀ ಸಾಮಾನ್ಯನ ದೃಷ್ಟಿಯಲ್ಲಿ ಹಬ್ಬ ಎಂದರೆ ನೆಪಕ್ಕೆ ದೇವರ ಹೆಸರು ಹೇಳಿ ರಸದೌತಣ ಸವಿಯುವುದು. ಯುಗಸ್ವಭಾವದಿಂದ ಹಬ್ಬ ಆಚರಣೆಯಲ್ಲಿ ಸಂಪ್ರದಾಯ ಕಟ್ಟು ಪಾಡನ್ನು ಗಮನಿಸದೆ ಇರುವವರೇ ಹೆಚ್ಚಾಗಿರುವರು. ಜಿಹ್ವಾಚಾಪಲ್ಯ ಆಧಾರಿತ ಹಬ್ಬಗಳು ನಮ್ಮವು. ಸಾಲಮಾಡಿಯಾದರು ಹಬ್ಬ ಮಾಡುವವರಿದ್ದಾರೆ, ಬಡಕುಟುಂಬಗಳಲ್ಲಿ ಹಾಲಿಗೆ ಸಕ್ಕರೆ ಸೇರಿಸಿ ಭಕ್ಷಗಳಿವೆ. ಇವೇ ಆಸಕ್ತಿ ಆಕರ್ಷಣೆ ಉಂಟುಮಾಡುವಂತಹವು. ಸಾಂಪ್ರದಾಯಿಕವಾಗಿ ಬಂದಿರುವ ವಿವಿಧ ರೀತಿಯ ಕಡುಬುಗಳು, ಲಾಡು, ಚಿರೋಟಿ, ಅಪ್ಪ

ಅದ್ರಸ, ಸಜ್ಜಪ್ಪ, ರವೆ ಉಂಡೆ, ಪಾಯಸ, ಮುಂತಾದುವು ಒಂದು ಗುಂಪಾದರೆ ಜಾಮೂನ್, ಜಿಲೇಬಿ, ಜಾಂಗೀರ್, ಮೈಸೂರ್‌ಪಾಕ್, ಸೋಹನ್‌ಪಪ್ಪಡಿ, ಹಲ್ವ, ರಸಗುಲ್ಲಾ, ಕೀರು ನಯನಾಜೂಕಾದ ಸಮಾಜದ ಭಕ್ಷ್ಯಗಳಾಗಿವೆ. ಒಬ್ಬಟ್ಟಿನ ಶಾಸ್ತ್ರಗಮನಾರ್ಹ. ಉಗಾದಿ ಹಬ್ಬದಲ್ಲಿ ಎಲ್ಲರೂ ಮಾಡುವ ಭಕ್ಷ್ಯವಾಗಿದೆ. ಶುಭ ಕಾರ್ಯಗಳಲ್ಲಿ ತೊವ್ವೆ, ಹುಳಿ, ಕೂಟು, ಪಲ್ಯ ಕೋಸಂಬರಿ ಚಿತ್ರಾನ್ನ ಆಂಬೊಡೆ ಪಾಯಸಗಳನ್ನೊಳಗೊಂಡ ಅಲಂಕಾರದ ಅಡಿಯೊಂದಿಗೇನೇ ಒಬ್ಬಟ್ಟುಮಾಡಬೇಕು. ಕೇರಳದಲ್ಲಿ ಉಗಾದಿ ತಿರುಓಣಂಗಳಲ್ಲಿ ಎಲ್ಲರೂ ನೈಯ್ಯಪ್ಪಂ ಪಾಲ್‌ಪಾಯಸಂ ಮಾಡುವರು. ರಾಮನವಮಿಯಂದು ರಾಮ ಹುಟ್ಟಿದ ಸಂಭ್ರಮದಲ್ಲಿ ಹಾಗೂ ದೇಸಿಗೆಯ ಬಿಸಿಲಲ್ಲಿ ತಂಪುಕೊಡುವ ಪಾನಕರಸಾಯನ, ನೀರು ಮಜ್ಜಿಗೆ ಹೆಸರುಬೇಳೆ ಕೋಸಂಬರಿ ನಿವೇದಿಸಿ ಸವಿಯುವುದನ್ನು ಚಮತ್ಕಾರವಾಗಿ ಹೇಳಲ್ಪಟ್ಟಿದೆ. ಈ ನೈವೇದ್ಯಗಳು ಆರೋಗ್ಯವರ್ಧಕವೆಂದು ಹೇಳಲಾಗಿದೆ. ನೃಸಿಂಹ ಜಯಂತಿಯಂದು ಇಂಥಾ ನೈವೇದ್ಯಗಳ ಜೊತೆಗೆ 'ಅಪ್ಪಂ' ಮಾಡುವ ರೂಢಿ ಇದೆ. ದೇವು ಅದರಕ್ಕೆ ಕಹಿ ಉದರಕ್ಕೆ ಸಿಹಿ ಎಂಬ ನಾಣ್ಣುಡಿಯಂತೆ ಉಗಾದಿಯಂದು ದೇವುಬೆಲ್ಲ ಸೇವನೆ ಆರೋಗ್ಯವರ್ಧಕ ಎಂದು ಹೇಳಲ್ಪಟ್ಟಿದೆ. ಸತ್ಯನಾರಾಯಣ ಪೂಜೆಯಂದು ಸಪಾತ (ರವೆ ಸಜ್ಜಿಗೆ) ಗಣೇಶನಿಗಾಗಿ ಕಡುಬು, ದೀಪಾವಳಿಯಂದು ಆವಿಯಲ್ಲಿ ಬೇಯಿಸಿದ ಕಡುಬುಗಳು. ಗಾಯತ್ರಿ ಹಬ್ಬ ಪಟದಹಬ್ಬದಂದು ಇಡ್ಲಿ ತೆಂಗಿನಹಾಲು ಸಾಂಪ್ರದಾಯಿಕವಾಗಿ ಬಂದಿರುತ್ತೆ. ಮಾಧ್ವರಲ್ಲಿ ಮಂಡಿಗೆ, ಸಕ್ಕರೆ ಹೋಳಿಗೆ ಹಯಗ್ರೀವ ಸಿಹಿತಿಂಡಿಗಳು, ಶ್ರೀ ವೈಷ್ಣವರಲ್ಲಿ ಪೊಂಗಲುಗಳು, ಮನೋಹರ, ತಿರುಪಲ್ಲಾಣಿ ಪಾಯಸ ವಿವಿಧ ಓಗರೆಗಳು, ಸ್ಮಾರ್ತರಲ್ಲಿ ಹುಗ್ಗಿ, ಕಡುಬು ಶಾಲ್ಯಾನ್ನ ನಿವೇದಿಸಲಾಗುವುದು. ತಿರುಪ್ಪಾವೈ ಸಂದರ್ಭದಲ್ಲಿ ಪ್ರತಿ ನಿತ್ಯವೂ ಪೊಂಗಲ್, ೨೭ ನೆ ದಿವಸ ಸಕ್ಕರೆ ಪೊಂಗಲ್ ೨೮ ನೆ ದಿವಸ ದಧ್ಯೋದನ, ಆನೆ ಹಬ್ಬ ಸಂಕ್ರಾಂತಿಯಂದು ಕದಂಬ, ಪೊಂಗಲ್‌ಗಳು ವಿಶೇಷ. ಕೃಷ್ಣಾಷ್ಟಮಿ ಭಕ್ಷ್ಯಗಳ ಮಯವಾದ ಹಬ್ಬ, ಬಂಧು ಮಿತ್ರರೆಲ್ಲರಿಗೂ ಇದು ನೆಚ್ಚಿನ ಹಬ್ಬವಾಗಿದೆ. ವ್ರಜದೇಶದ ಹಾಗೂ ದಕ್ಷಿಣದ ಕೆಲವು ಕೃಷ್ಣಕ್ಷೇತ್ರಗಳಲ್ಲಿ ೫೬ ಬಗೆ ತಿಂಡಿಗಳನ್ನು ಇವುಗಳ ಜೊತೆಗೆ ಹಣ್ಣು ತರಕಾರಿಗಳನ್ನು ಫಲವಸ್ತ್ರದಲ್ಲಿ ಕಟ್ಟುವರು.

ಅಖಂಡರಾಷ್ಟ್ರೀಯ ಭಾವನೆ ಬೆಳೆಸುವ ಉದ್ದೇಶದಿಂದ ಸ್ವಾತಂತ್ರ್ಯೋತ್ಸವ ಗಣರಾಜ್ಯೋತ್ಸವಗಳು ರಾಷ್ಟ್ರ ಹಬ್ಬಗಳಾಗಿರುತ್ತವೆ. ಆದರೆ ಹಬ್ಬದೂಟ ಇಲ್ಲಿ ಕಾಣಲಾಗದು. ಬುದ್ಧ ಗಾಂಧೀಜಿ ಮುಂತಾದ ಮಹಾಪುರುಷರ ಸ್ಮಾರಕ ಸೂಚಿಸುವ ಸಲುವಾಗಿ ಜಯಂತಿ ಪುಣ್ಯತಿಥಿಗಳು ಆಚರಣೆಯಲ್ಲಿದೆ. ಹುಟ್ಟು ಹಬ್ಬ ಮದುವೆ, ಸೀಮಂತ ಹೂಮುಡಿಸುವುದು, ೬೦, ೭೦, ೮೦ ನೆ ಶಾಂತಿ ಕನಕಾಭಿಷೇಕ ಗೃಹಪ್ರವೇಶ ಮುಂತಾದುವು ಶಾಸ್ತ್ರೋಕ್ತವಾಗಿದ್ದರೂ, ಇವು ವ್ಯಕ್ತಿಯ ಸ್ಥಾನಮಾನ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತವೆ. ಬೀಳ್ಕೊಡುಗೆ ಅಭಿನಂದನ ಸಮಾರಂಭಗಳಲ್ಲಿ ಭಾರಿ 'ಬಫೆ' ಗೆಟ್ ಟುಗೆದರ್ ಭೋಜನ ಕೂಟ ಟೀಪಾರ್ಟಿಗಳು ವೈಯಕ್ತಿವಾಗಿ ಭಾರಿ ಹಬ್ಬದ ಲೆಖ್ಖವೇ.

## ಹಬ್ಬದ ವಾತಾವರಣ :

ಹಬ್ಬದ ಸಡಗರ ಸಂಭ್ರಮಗಳ ಪ್ರತಿಯೊಂದು ಹಂತವು ಯಾವರೀತಿ ಮನ ಸಂತೋಷವನ್ನು ತರುವುದು ಎಂಬುದನ್ನು ಈ ಕೆಳಕಂಡ ವಾಸ್ತವಿಕ ಉದಾಹರಣೆಯೊದಿಗೆ ಗ್ರಹಿಸಬಹುದು. 'ಕೌಸಲ್ಯಾ ಸುಪ್ರಜಾರಾಮ' ಧ್ವನಿಸುರುಳಿಯಿಂದಾಗಿ ಎಲ್ಲರಿಗೂ ಸುಪ್ರಭಾತ, ನಂತರ ಸ್ನಾನಾದಿಗಳಿಗೆ ಸೌಮ್ಯವಾದ ಕಲಹ, ಒಳ್ಳೆ ಬಿಸಿಲಿನ ಬೆಳಗ್ಗೆ ಜೊತೆಗೆ ಸಂಗೀತ ಧ್ವನಿಸುರುಳಿ, ಹೊರಗಡೆ ಹೂವು ತರಕಾರಿಯವರ ಕೂಗು, ಗೃಹಿಣಿಯಾದವಳು ಮಡಿಯುಟ್ಟು ಟವಲನ್ನು ತಲೆಯಿಂದ ಬಿಚ್ಚದೆ ಅಡಿಗೆ ಮನೆ ಸ್ವಚ್ಛಗೊಳಿಸಿ ರಂಗವಲ್ಲಿ ಇಟ್ಟು ದೇವರಿಗೆ ದೀಪಹಚ್ಚಿ ಮೊದಲು 'ಅಲ್ಪೋಪಹಾರ' ತಯಾರಿಸುವಳು. ಟಿಫನ್ ಸೇವಿಸುವಾಗಲೆ ಮುಂದಿನ ಕಾರ್ಯಗಳನ್ನು ನೆನೆಸಿಕೊಳ್ಳುವುದು ಹಾಗೂ ಏರುತ್ತಿರುವ ಸೂರ್ಯನ ಪ್ರತಿಭೆ ಪರ್ವವನ್ನು ಇಮ್ಮಡಿಸುವುದು. ಘಮಘಮ ಒಗ್ಗರಣೆ ವಾಸನೆ, ಕುಟ್ಟುವುದು ರುಬ್ಬುವುದು ಮುಂತಾದ ಅಡಿಗೆ ಸಿದ್ಧತೆ ಮಕ್ಕಳು ಆಗಿಂದಾಗ್ಗೆ ಒಂದು ಇಣುಕಿ ನೋಡುವುದು, ಮಾಡಿರುವ ಪದಾರ್ಥಗಳನ್ನು ನೋಡಿ ಮನಸಿನಲ್ಲೇ ಹಿಗ್ಗುವುದು, ತಾಯಿಯ ಹೊರತು ಬೇರಾರಿಗೂ ಕಾಣದೆ ತಿಂಡಿಯನ್ನು ಲಪಟಾಯಿಸುವುದು, ಮಧ್ಯಾಹ್ನ ಬಾರಿತೇಗಿನ ಊಟ, ನಂತರ ತೂಕಡಿಕೆ ಇತ್ಯಾದಿ - ಇದೇ ಹಬ್ಬ, ಈ ಸಂಭ್ರಮದಲ್ಲಿ ಮಾಡಿದ್ದನ್ನು ದೇವರಿಗೆ ನಿವೇದಿಸುವುದು ಮರೆತುಹೋಗುವುದು.

## ಹಬ್ಬಗಳು - ವ್ಯಾಪಾರ ಸಮುದಾಯ :

ಹಬ್ಬ ಹರಿದಿನಗಳಲ್ಲಿ ಹೂವು ಹಣ್ಣು ತರಕಾರಿ ಬೆಲ್ಲಸಕ್ಕರೆ ಬೇಳೆ ಎಣ್ಣೆತುಪ್ಪ ನಿಬಂಧನೆಗಳಿಗೆ ಮೀರಿದು ಭಾರಿಯಾಗುವುದು ಪ್ರತಿವರ್ಷ ಮಾಮೂಲಾಗಿ ಎದುರಿಸಬೇಕಾಗುವ ಸಮಸ್ಯೆ. 'ಅಪ್ಪನ ಜೇಬಿನ ದುಡ್ಡುಗಳೆಲ್ಲಾ ಚಟಪಟ ಗುಟ್ಟುತ ಸಿಡಿಯುವುವು' ಎಂಬಂತೆ ದೀಪಾವಳಿ ಸಾಲು ಹಬ್ಬ ಅತ್ಯಂತ ದುಬಾರಿ ಹಬ್ಬವಾಗಿರುತ್ತೆ. ಆಯುಧ ಪೂಜೆಯಂದು ಹೂವುಹಣ್ಣು ಕಡಲೆಪುರಿ ಬಾಳೆ ಕಂಬ ಸಿಹಿತಿಂಡಿಗಳ ಬೆಲೆ ಗಗನಕ್ಕೇರುವುದು. ಎಂಥಾ ಕಳಪೆ ಮಿಠಾಯಿ ಅಂಗಡಿ ಅಂದು ಹಿಂದಾದ ನಷ್ಟವನ್ನು ಭರಿಸುತ್ತದೆ. ಉಪಾಕರ್ಮದಂದು ಸೆಲೂನ್‌ಗಳಲ್ಲಿ ಗಂಟೆಗಟ್ಟಲೆ ಕಾಯಬೇಕು. ಮೈಸೂರು ನಗರಕ್ಕೆ ದಸರ ಎಂದರೆ ರಾತ್ರಿ ಹಗಲೂ ಹಬ್ಬ.

## ಹಬ್ಬಗಳಲ್ಲಿ ಅಶಿಸ್ತು :

ಉಗಾದಿ ದೀಪಾವಳಿಗಳಲ್ಲಿ ಇಸ್ಪೆಟ್ ಆಟ, ಬೇರೆ ತರಹದ ಜೂಜ, ಮದ್ಯಪಾನ ಸೇವನೆ, ಶಿವರಾತ್ರಿಯಂದು 'ಜಾಗರಣೆ' ಎಂಬ ಹೆಸರಿನಲ್ಲಿ ಬೀದಿಗಳಲ್ಲಿ ಆಟದಾಟ ಕೂಗಾಟ, ಇಸ್ಪೆಟ್, ಕಾಸಿನ ಆಟಗಳು, ಗಣೇಶೋತ್ಸವಗಳಲ್ಲಿ 'ಮೈಕಾ'ಸುರನ ಹಾವಳಿ, ಹಣಸಂಗ್ರಹಣೆ ಎಂಬ ಹೆಸರಿನಲ್ಲಿ 'ಸುಲಿಗೆ' ಹೊಡೆದಾಟ ಗುಂಪು ಘರ್ಷಣೆ ಮುಂತಾದ ಅಶಿಸ್ತಿನಿಂದ ಪೋಲಿಸ್ ಬಂದೋಬಸ್ತ್ ಅನಿವಾರ್ಯವಾಗಿದೆ. ಸಂಪ್ರದಾಯ ತಿಳಿಯದವರಿಗೆ ಜಾಗರಣೆ ಎಂದರೆ ನಿದ್ದೆಗೆಟ್ಟರೆ ಸಾಕು ಪುಣ್ಯಪ್ರಾಪ್ತಿ. ಏಕೆ ಹೇಗೆ ಎಂಬುದು ಮುಖ್ಯವಲ್ಲ. ಹೋಳಿ ಹಬ್ಬದಂದು ಸ್ನೇಹ ಸೌಹಾರ್ದತೆ ಎಂಬ ಹೆಸರಿನಲ್ಲಿ ಗುಲಾಲ್ ಹಚ್ಚುವುದು ಬಣ್ಣ ಎರಚುವುದು ಅನೇಕ ಸಂದರ್ಭಗಳಲ್ಲಿ ವಿಕೋಪಕ್ಕೆ ತಿರುಗುವುದು. ಶಾಲಾ ಕಾಲೇಜುಗಳಲ್ಲಿ ಸಮಸ್ಯೆ ತೀವ್ರರೂಪ ತಾಳಿರುವುದರಿಂದ ರಜಾ ಘೋಷಿಸಲಾಗುವುದು. ಊಟದ ನಂತರ ಎಂಜಲೆಲೆ ದಿಕ್ಕಾಪಾಲಾಗಿ ಬಿಸಾಡಿರುವುದು ಘೋರದೃಶ್ಯವೇ ಸರಿ. ಅದನ್ನೇ ತೆಗೆದುಕೊಂಡು ತಿನ್ನುವವರ ದೃಶ್ಯ ಇನ್ನೂ ಘೋರ. ಇದು ನಗರ ನೈರ್ಮಲಿಕರಣ ಹಾಗೂ ದೇಶದ ಸಮಸ್ಯೆಗಳಾಗಿವೆ. ಭಾರಿ ಶ್ರೀಮಂತರ ಹಬ್ಬಗಳಲ್ಲಿ ಆಹ್ವಾನಿತರ ವಾಹನಗಳು ಅಜ್ಞಾದಿಡ್ಡಿಯಾಗಿ ನಿಲ್ಲಿಸಿರುವುದು ವೈಭವವನ್ನೇನೋ ಸೂಚಿಸುವುದು. ಆದರೆ ಜನ ವಾಹನ ಸಂಚಾರಕ್ಕೆ ಅಡ್ಡಿಯಾಗುವುದು ಎಂದು ಅವರ ಗಮನಕ್ಕೆ ಬರುವುದಿಲ್ಲ.

ಹಬ್ಬಗಳ ಆಚರಣೆಯಲ್ಲಿ ವಿಲಾಸ, ಮನರಂಜನೆಗಳು ಸೇರಿ ಬಂದಿರುವುದರಿಂದ ಹಳೆ ಸಂಪ್ರದಾಯ ಮರೆಯಾಗುತ್ತಿರುವಂತೆ ತೋರುವುದು. ಆದರೂ ಪೂರ್ವಜರ ಕಟ್ಟುಪಾಡಿನಿಂದಲೋ ಅಥವ ಹಿರಿಯರ ಆಸೆ ಒತ್ತಡಗಳಿಂದಲೋ ಹಬ್ಬಗಳು ನಿರಂತರವಾಗಿ ಮುಂದುವರೆಯುತ್ತಿರುವುದು ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ.

******

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

*ಶ್ರೀ ಗೋವಿಂದರಾಜಸ್ವಾಮಿ ದೇವಾಲಯ*
*ಶ್ರೀ ಕೋದಂಡರಾಮಸ್ವಾಮಿ ದೇವಾಲಯ*
*ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು*
*ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ*
*ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ*

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ರೂ. 20/- ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

# ವಾಚಕರಲ್ಲಿ.....

ಏರುತ್ತಿರುವ ಎಲ್ಲ ರೀತಿಯ ವಸ್ತುಗಳ ಬೆಲೆಗಳ ನಡುವೆ "ಸಪ್ತಗಿರಿ"ಯ ಉತ್ಪಾದನಾ ವೆಚ್ಚವೂ ಏರುತ್ತಿದೆಯಾಗಿ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ನಿರ್ಣಯದ ಪ್ರಕಾರ ಏಪ್ರಿಲ್ 1996 ರಿಂದ ಸಪ್ತಗಿರಿಯ ಬೆಲೆಯನ್ನು ನಾಲ್ಕು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದೆ.

1996 ಏಪ್ರಿಲ್ ತಿಂಗಳಿನಿಂದ ವಾರ್ಷಿಕ ಚಂದಾ ರೂ. 48/- ಆಗಿರುತ್ತದೆ. ವಾರ್ಷಿಕ ಚಂದಾಹಣ ತುಂಬುವವರು ಈ ಹೊಸ ಬೆಲೆಯನ್ನು ಗಮನಿಸಿ ತುಂಬಬೇಕೆಂದು ವಿನಂತಿ.

ಈಗಾಗಲೇ ಚಂದಾದಾರರಾಗಿರುವ ಸದಸ್ಯರ ಉಳಿಕೆ ಹಣವನ್ನು ಹೊಸಬೆಲೆಗೆ ತಕ್ಕಂತೆ ಹೊಂದಿಸಲಾಗುವುದಾಗಿ, ಅವರುಗಳು ತಮ್ಮ ಚಂದಾ ಅವಧಿಯನ್ನು ಸರಿನೋಡಿಕೊಂಡು ಪುನರುದ್ಧರಿಸಬೇಕೆಂದು ವಿನಂತಿ.

ಏಜಂಟರುಗಳು ಏಪ್ರಿಲ್ 1996 ರಿಂದ ತಮ್ಮ ಠೇವಣಿಯನ್ನು ಪ್ರತಿಗಳಿಗೆ ತಕ್ಕಂತೆ ಹೆಚ್ಚಿಸಬೇಕಾಗಿ ವಿನಂತಿ.

## ಸಪ್ತಗಿರಿ

**ಬಿಡಿಪ್ರತಿ - ರೂ. 4/-** **ವಾರ್ಷಿಕ ಚಂದಾ - ರೂ. 48/-**

(1996 ಏಪ್ರಿಲ್ ಸಂಚಿಕೆಯಿಂದ)

ಓದುಗರು, ಏಜಂಟರು ಹೊಸ ಬೆಲೆಗೆ ಹೊಂದಿಕೊಂಡು ಸಹಕರಿಸಬೇಕಾಗಿ ವಿನಂತಿ.

ಸಂಪಾದಕರು, ಸಪ್ತಗಿರಿ.

# ಆದಿಚುಂಚನಗಿರಿ

—ಕೆ. ರಾಜೇಶ್ವರಿಗೌಡ.



ಭಾರತೀಯ ಪರಂಪರೆಯಲ್ಲಿ ಗುರುವಿನ ಸ್ಥಾನ ಪೂಜನೀಯವಾಗಿದೆ; ಪ್ರಭಾವಯುತವಾಗಿದೆ. ಅನೇಕ ಸಾಮ್ರಾಜ್ಯಗಳ ಉಗಮಕ್ಕೆ ಪುನರುತ್ಥಾನಕ್ಕೆ ಕಾರಣಕರ್ತರಾದ ಗುರುಗಳನ್ನು ಇತಿಹಾಸದಲ್ಲಿ ಕಾಣುತ್ತೇವೆ.

ಧರ್ಮದ ತಳಪಾಯದ ಮೇಲೆ ಜನಪದರನ್ನು ಸತ್ಯಪಥದಲ್ಲಿ ಕೈಹಿಡಿದು ನಡೆಸುತ್ತಾ ಬಂದವರು ಸದ್ಗುರುಗಳು. "ಸತ್ಯ ದೊಡ್ಡದು; ಸತ್ಯದಲ್ಲಿ ನಡೆಯುವವನು ಇನ್ನೂ ದೊಡ್ಡವನು, ಸಮಾಜವನ್ನು ಸತ್ಯದ ಹಾದಿಗೊಯ್ಯುವವನು ಮಹಾತ್ಮನು" - ಸಂತ ಗುರುನಾನಕನ ಈ ಮಾತು ಸತ್ಯ, ಧರ್ಮ, ಮಾನವೀಯತೆಗಳ ಸಿದ್ಧಾಂತಕ್ಕೆ ಬದ್ಧರಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಅನೇಕ ಮಾನವಶ್ರೇಷ್ಠರನ್ನು ನೆನೆಯುವಂತೆ ಮಾಡುತ್ತದೆ.

ಪುರಾಣೇತಿಹಾಸ ಪ್ರಸಿದ್ಧ ಪುಣ್ಯಶಿವಕ್ಷೇತ್ರ ಆದಿಚುಂಚನಗಿರಿ. ಭೈರವನ ಭಕ್ತರಿಗೆ ಪರಿಚಿತವಿದ್ದ ಈ ಕ್ಷೇತ್ರ ಇಂದು ಪರಿಮಿತಿಯ ಗಡಿದಾಟಿ ಸಾಗರದಾಚೆಗೂ ತನ್ನ ಕೀರ್ತಿ ಕೇತನವನ್ನು ಮುಗಿಲೆತ್ತರಕ್ಕೆ ವಿಜೃಂಭಿಸಿದೆ ಎಂಬುದು ಅತ್ಯಂತ ಹೆಮ್ಮೆಯ ಸಂಗತಿ. ಆದಿಚುಂಚನಗಿರಿಯ ಪೀಠಸ್ಥ ಸದ್ಗುರು ಪರಂಪರೆಯಲ್ಲಿ ಪ್ರಸ್ತುತ ಜಗದ್ಗುರುಗಳಾದ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಜಿಯವರ ಹೆಸರು "ದ್ಯಾವಾಪೃಥ್ವಿ"ಯಂತೆ ಅಖಂಡವಾಗುಳಿಯುವಂತಹುದು. ಶ್ರೀ ಕ್ಷೇತ್ರದ ಸಿದ್ಧ ಸಿಂಹಾಸನಾಭಿಷಿಕ್ತರಾದ ಒಂದೆರಡು ದಶಕಗಳಲ್ಲಿಯೇ ಅವರು ಮಾಡಿದ ಅಮೋಘ ಸಾಧನೆಗಳು ಅಗಣಿತ; ಮೂಕವಿಸ್ಮಿತಗೊಳ್ಳುತ್ತವೆ.

ಕ್ರಿ. ಶ. ೧೬ ನೇ ಶತಮಾನದ ವಿಜಯನಗರ ಸಾಮ್ರಾಜ್ಯದ ಲಕ್ಷ್ಮೀಧರ ಅಮಾತ್ಯನು ದಾನ ಧರ್ಮಕ್ಕೆ ಹೆಸರಾದವನು. "ಕೆರೆಯಂ ಕಟ್ಟಿಸು, ಬಾವಿಯಂ ತೋಡಿಸು, ದೇವಾಗಾರಂಗಳಂ ನಿರ್ಮಿಸು..... ಎಂದು ತನ್ನ ತಾಯಿ ತಾನು ಮಗುವಾಗಿದ್ದಾಗ ಜೋಗುಳ ಹಾಡಿದ್ದರಿಂದ ತಾನು ಜನೋಪಯೋಗಿ ಕಾರ್ಯಗಳನ್ನು ಮಾಡಲು ಪ್ರೇರಣೆಯಾಯಿತೆಂದು ಹೇಳಿದ್ದಾನೆ.

ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರೂ ಅಂತಹುದೇ ಧರ್ಮ ಬದ್ಧ ಪರಿಸರದಲ್ಲಿ ಬೆಳೆದು ಬಂದ ಸಹಜವಿರಾಗಿಗಳು. ಅವರು ಸಂಘಜೀವಿಯೂ ಹೌದು; ಸಂಬುದ್ಧರೂ ಹೌದು, ತಾವು ಕಂಡುಕೊಂಡ ಜ್ಞಾನದ ಬೆಳಕನ್ನು ಸಮಾಜದ ಅಜ್ಞಾನದ ಕತ್ತಲೆಯನ್ನು ನಿವಾರಿಸಲು ಬಳಸುತ್ತಿರುವ ನಿಷ್ಕಾಮಯೋಗಿಗಳೂ ಹೌದು.

"ಮಠಗಳಿರುವುದೇ ಸಮಾಜಕ್ಕಾಗಿ" ಎಂಬ ಅವರ ಮಾತಿನಲ್ಲಿ ಸಮಾಜದ ಒಳಿತೇ ಅವರ ನಿತ್ಯಮಂತ್ರ ಎನ್ನುವುದು ನಿಚ್ಚಳವಾಗುತ್ತದೆ. ಅವರ ಮಹತ್ವದ ಸಾಧನೆಗಳೆಲ್ಲದರ ಮೂಲಸತ್ವ ಸಾಮಾಜಿಕ ಕಳಕಳಿಯೇ ಆಗಿದೆ. ಸಮಾಜ ಹೇಗೆ ಒಳಿತಿನತ್ತ ಸಾಗಬೇಕೆಂಬುದನ್ನು ಮಾತುಗಳಲ್ಲಿ ನಿರೂಪಿಸಿ, ಪ್ರಯೋಗಿಕವಾಗಿ ಮಾಡಿತೋರಿಸಿ, "ನಡೆನುಡಿಗಳೊಂದಾದೊಡೆ ಶಿವಮೆಚ್ಚು"ವಂತೆ ಜೀವನ ಸಾರ್ಥಕ ಮಾಡಿಕೊಂಡವರೆಂದರೆ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರು. ಮೇರು ಸದೃಶವಾದ ಅವರ ವ್ಯಕ್ತಿತ್ವವನ್ನು ಕಂಡಾಗ ಕಾರ್ತೀಕ ದೀಪೋತ್ಸವವನ್ನು ಕಂಡಂತೆ ಮನಸ್ಸು ಪವಿತ್ರವಾದ, ನಿರಾಳವಾದ, ಸುಪ್ರಸನ್ನತೆಯನ್ನು ಅನುಭವಿಸುತ್ತದೆ.

ಸಮಾಜಹಿತ ಚಿಂತಕರಾದ ಅವರು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ರಂಗಗಳಲ್ಲಿ ಮಾಡಿರುವ ಮಹತ್ತರ ಕಾರ್ಯಗಳು ಅಸದೃಶವಾಗಿವೆ.

ಶ್ರೀ ಆದಿಚುಂಚನಗಿರಿ ಕ್ಷೇತ್ರದಲ್ಲಿರುವ ಅನ್ನದಾನಿ ಭೈರವ ನಿಲಯ ನಿತ್ಯದಾಸೋಹ ತಾಣ; ಈ ಶತಮಾನದ ಅಪೂರ್ವವೆನಿಸುವ ಪಂಚಗೋಪುರ ಸಹಿತವಾದ ಕಾಲ ಭೈರವೇಶ್ವರ ಸ್ವಾಮಿಯ ದೇವಾಲಯದ ದ್ರಾವಿಡ ಶೈಲಿಯ ಭವ್ಯ ನಿರ್ಮಾಣ, ಸಂಸ್ಕೃತ ಮಹಾಪಾಠ ಶಾಲಾ, ಕುಂಭಮೇಳ ನಿಯೋಜನೆ, ಧರ್ಮಗೋಷ್ಠಿಗಳು, ಅರ್ಚಕರ ಸಮ್ಮೇಳನ, ಸಂಸ್ಕೃತಗೋಷ್ಠಿ ಇವೆಲ್ಲ ಅವರ ಧರ್ಮಪ್ರಿಯತೆಯ ಪ್ರತೀಕಗಳು.

ಆದಿಚುಂಚನಗಿರಿಗೆ ಸಮೀಪ, ಬೆಂಗಳೂರು - ಮಂಗಳೂರು, ಹೆದ್ದಾರಿಯಲ್ಲಿ ಕಣ್ಮನ ಸೆಳೆಯುವ ಬಾಲಗಂಗಾಧರನಾಥ ನಗರದಲ್ಲಿರುವ ಶ್ರೀ ಆದಿಚುಂಚನಗಿರಿ ಆಸ್ಪತ್ರೆ ಅತ್ಯಾಧುನಿಕ ವೈದ್ಯಕೀಯ ಸವಲತ್ತುಗಳಿಂದ ಕೂಡಿದ ವಿವಿಧ ವ್ಯಾಧಿಗಳ ನಿವಾರಣೆಗೆ ಮಾಸಲಾದ ಸುಸಜ್ಜಿತ ಆಸ್ಪತ್ರೆ. ದಿನದ ಇಪ್ಪತ್ನಾಲ್ಕು ಗಂಟೆಗಳ ಸೇವೆ, ಬಡವರಿಗೆ ಉಚಿತ ಊಟ, ಔಷಧಿ ವಿತರಣೆ ಈ ಆಸ್ಪತ್ರೆಯ ವೈಶಿಷ್ಟ್ಯ. ದೀನ ದರಿದ್ರರ ಪಾಲಿಗೆ ವರದಾನದಂತಿರುವ ಈ ಆಸ್ಪತ್ರೆಯಲ್ಲಿ ರೋಗಿಗಳನ್ನು ನೋಡಿಕೊಳ್ಳಲು ಬರುವ ಬಂಧುಗಳಿಗೂ ಉಚಿತ ವಸತಿ ಸೌಕರ್ಯ ಇದೆ.

ಬೆಂಗಳೂರು, ಮೈಸೂರು, ಹಾಸನ, ಶಿವಮೊಗ್ಗ, ಸಿದ್ಧರಬೆಟ್ಟ, ಪಿರಿಯಾಪಟ್ಟಣಗಳಲ್ಲಿನ ವಿಶಾಲ ಹಾಗೂ ಅನುಕೂಲಕರ ಸಮುದಾಯ ಭವನಗಳು ಸಾಂಘಿಕ ಚಟುವಟಿಕೆಗಳಿಗೆ ಉಪಯುಕ್ತವಾಗಿದೆ.

ವಯೋವೃದ್ಧರಿಗಾಗಿ ನಿರ್ಮಿಸಿದ 'ವೃದ್ಧಾಶ್ರಮ' ವಯಸ್ಸಾದವರ ಬದುಕಿಗೆ ಆಸರೆಯ ನೆಲೆಯಾಗಿದೆ.

ಅರ್ಚಕರ ಹಳ್ಳಿಯಲ್ಲಿ ಅಂಧಮಕ್ಕಳಿಗೆಂದೇ ಇರುವ 'ಅಂಧಮಕ್ಕಳ ಆಶ್ರಮ' ದೃಷ್ಟಿಹೀನ ನತದೃಷ್ಟ ಮಕ್ಕಳ ಪಾಲಿಗೆ ಪೂರಕವಾಗುವಂತೆ ಅದೃಷ್ಟದ ಬಾಗಿಲನ್ನು ತೆರೆದಿದೆ. ಉಚಿತ ವಿದ್ಯಾದಾನದೊಡನೆ ಅವರವರ ಪ್ರತಿಭೆಗನುಗುಣವಾಗಿ ಪಠ್ಯೇತರ ತರಬೇತಿ, ಈ ವಸತಿ ಆಶ್ರಮದಲ್ಲಿ ನೀಡುತ್ತಾರೆ.

ಹೆಚ್. ಎಂ. ಟಿ. ಘಟಕವನ್ನು ಒಳಗೊಂಡಿರುವ 'ಮಹಿಳಾ ಸೇವಾಶ್ರಮ'ದಲ್ಲಿರುವ ಮಹಿಳೆಯರು ತಮ್ಮ ಜೀವನದಲ್ಲಿ ನಿರಾಸೆಯ ಕಢ್ಥಿಂಗಳು ತೊಲಗಿ ಭರವಸೆಯ ಬೆಳ್ದಿಂಗಳು ಮೂಡಿದ ಸಂತೃಪ್ತಿ ಹೊಂದಿದ್ದಾರೆ.

ಯುವಕರಿಗಾಗಿ ಉತ್ತಮ, ಸದೃಢ ವ್ಯಕ್ತಿತ್ವ ನಿರ್ಮಾಣಕ್ಕೆಂದೇ ನಡೆಸಲಾಗುತ್ತಿರುವ ಜನಜಾಗೃತಿ ಶಿಬಿರಗಳು ಸತ್ಫಲವನ್ನು ನೀಡಿವೆ.

ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡಿಸಿ, ಸ್ವಾವಲಂಬಿಗಳನ್ನಾಗಿ ಮಾಡುವ 'ಮಹಿಳಾ ಜಾಗೃತಿ

ಶಿಬಿರ'ಗಳು ಶ್ರೀಗಳವರು ಸ್ತ್ರೀಯರಿಗೆ ನೀಡಿರುವ ಗೌರವ - ಆದ್ಯತೆಯ ಸಂಕೇತವಾಗಿದೆ.

ತಾಯ್ತಂದೆಗಳಿಂದ ತ್ಯಾಜ್ಯರಾದ ಮಕ್ಕಳು ಸ್ವಾಮಿಜಿಯವರ ಅಕ್ಕರೆಯ ಮಡಿಲಲ್ಲಿ ಅನಾಥರಾಗದೆ ಸನಾಥರಾಗಿದ್ದಾರೆ. ಪ್ರೀತಿ ಕಾಣದೆ ಕಂಗಾಲಾದ ಕಂದಮ್ಮಗಳು 'ಅನಾಥಾಶ್ರಮ'ದ ವಾತ್ಸಲ್ಯದ ನೆರಳಲ್ಲಿ ನೆಮ್ಮದಿಯಿಂದಿದ್ದಾರೆ.

ಶ್ರೀ ಕ್ಷೇತ್ರದಲ್ಲಿ ನಡೆಯುವ 'ಮಕ್ಕಳ ಸಮ್ಮೇಳನ' ಮಕ್ಕಳ ಮನೋವಿಕಾಸದಲ್ಲಿ ಕ್ರಿಯಾಶೀಲವಾಗಿವೆ. ಸ್ವಾಮಿಜಿಯವರ ಪಟ್ಟಾಭಿಷೇಕ ವಾರ್ಷಿಕ ಮಹೋತ್ಸವದಂದು ನಡೆಯುವ ಜಾನಪದ ಮೇಳ ಬಹಳ ವಿಶಿಷ್ಟವಾದದ್ದು. ಆಧುನಿಕ ನಾಗರಿಕತೆ ಅಬ್ಬರದಲ್ಲಿ ಸೊರಗಿ ಹೋಗುತ್ತಿರುವ ಜನಪದ ಕಲೆ ಪ್ರತಿ ವರ್ಷವೂ ಆದಿಚುಂಚನಗಿರಿಯಲ್ಲಿ ಸ್ವಾಮಿಜಿಯವರ ಸಮ್ಮುಖದಲ್ಲಿ ಜೀವ ತಳೆಯುತ್ತದೆ. ನಮ್ಮ ನಾಡಿನ ನಾಡಿಮಿಡಿತವಾದ ಜನಪದ ಕಲೆಯನ್ನು ಪುನರುಜ್ಜೀವನಗೊಳಿಸಿ, ಭಾಗವಹಿಸಿದ ಜನಪದ ಕಲಾವಿದರಿಗೆಲ್ಲಾ "ಅಶನ-ವಸನ-ಧನ"ಗಳ ಆತಿಥ್ಯ ನೀಡಿ ಗೌರವಿಸುವುದನ್ನು ಕಂಡಾಗ, ಪುಳಕಿತರಾದ ಕಲಾವಿದರ ಮಾಸಿದ ಕಣ್ಣುಗಳಲ್ಲಿ ಸಂತಸದ ಹೊಳಪು ಮೂಡಿದಾಗ ಅದೊಂದು ಅವಿಸ್ಮರಣೀಯ ಸಂದರ್ಭವೆನಿಸುತ್ತದೆ.

'ಉಚಿತ ಸಾಮೂಹಿಕ ವಿವಾಹಗಳು ಬಡವರ ಪಾಲಿಗೆ ಕಂಕಣ ಬಲದ ದಾರಿದೀಪವಾಗಿವೆ. 'ಉಚಿತ ನೇತ್ರ ಶಿಬಿರಗಳು' ಕಣ್ಣಿನ ಚಿಕಿತ್ಸೆಯನ್ನು ದೂರದೂರಿಗೆ ತೆರಳದೆ ಮಾಡಿಸಿಕೊಳ್ಳಲು ಸಹಕಾರಿಯಾಗಿವೆ.

ವೈದ್ಯಕೀಯ, ತಾಂತ್ರಿಕ ಮಹಾವಿದ್ಯಾಲಯಗಳು; ಕೈಗಾರಿಕಾ ತರಬೇತಿ ಕೇಂದ್ರ; ಉಪಾಧ್ಯಾಯ ತರಬೇತಿ ಕೇಂದ್ರ; ಪದವಿ ಕಾಲೇಜುಗಳು; ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳು ಸೇರಿದಂತೆ ಸುಮಾರು ಇನ್ನೂರೈವತ್ತಕ್ಕೂ ಮಿಗಿಲಾದ ಶಿಕ್ಷಣ ಸಂಸ್ಥೆಗಳನ್ನು 'ಶ್ರೀ ಆದಿಚುಂಚನಗಿರಿ ಎಜುಕೇಷನಲ್ ಟ್ರಸ್ಟ್' ನಡೆಸುತ್ತಿದೆ. ಆರ್ಥಿಕ ಮುಗ್ಗಟ್ಟಿನಿಂದ ಬಳಲುತ್ತಿರುವ ಅನೇಕ ಶಾಲೆಗಳನ್ನು ದತ್ತು ತೆಗೆದುಕೊಂಡು ಅವುಗಳಿಗೆ ಜೀವದಾನ ಮಾಡುವ ಮೂಲಕ ಎಷ್ಟೋ ಕುಟುಂಬಗಳಿಗೆ ಅನ್ನ ನೀಡಿದ ಪುಣ್ಯ ಈ ಟ್ರಸ್ಟಿನದು. ಕುಗ್ರಾಮಗಳಲ್ಲೂ ಮಠ ನಡೆಸುತ್ತಿರುವ ಶಾಲೆಗಳನ್ನು ಕಂಡಾಗ ಅವುಗಳ ರೂವಾರಿಯಾದ ಶ್ರೀ ಸ್ವಾಮಿಜಿಯವರ ಬಗ್ಗೆ ಹೃದಯ ತುಂಬಿ ಬರುತ್ತದೆ.

"ಸ್ವದ್ವರ್ತನೆ, ಪರಹಿತ ಚಿಂತನೆ - ಸತ್ಪುರುಷರ ಆತ್ಮ ಸಂಪತ್ತು" - ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರಲ್ಲಿ ಅದು ಧಾರಾಳವಾಗಿದೆ. ಅವರ ಮಹತ್ವಾಕಾಂಕ್ಷೆಯ ಅಕ್ಷಯ ನಿಧಿಯಿಂದ ಸಾಕಾರ ತಳೆದ ಪ್ರತಿಯೊಂದು ಯೋಜನೆಗಳೂ ಇಂದು ನಿಸ್ಪೃಹ ಕಾರ್ಯ ತತ್ಪರವಾಗಿವೆ.

ನಮ್ಮ ನಡುವೆ ಇರುವ ಶ್ರೀಗಳವರು ತಾವು ಮಾಡುತ್ತಿರುವ ಜನೋಪಕಾರಿ ಕೆಲಸಗಳಿಂದಲೇ ಅವತಾರ ಪುರುಷರೆನಿಸಿದ್ದಾರೆ. ಸಾಮಾನ್ಯರಿಗೆ ಅಸಾಧ್ಯವೆನಿಸುವ ಅದ್ಭುತಗಳನ್ನು ವಾಸ್ತವವಾಗಿಸಿದ ದ್ರಷ್ಟಾರರಾಗಿದ್ದಾರೆ. ವಿದೇಶಗಳಲ್ಲೂ ಭಾರತೀಯ ಸಂಸ್ಕೃತಿ ಪತಾಕೆಯನ್ನು ಹಾರಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ.

ಶ್ರೀ ಶ್ರೀಗಳು ತಮ್ಮ ಸತ್ವಭರಿತ ಸಾಧನೆಗಳಿಂದಲೇ ಸಾಮಾಜಿಕ ಪ್ರಜ್ಞೆಯುಳ್ಳ ಸೀಮಾಪುರುಷರ ಸಾಲಿಗೆ ಸೇರುವ ನಿಸ್ಸೀಮ ಮಹಿಮರಾಗಿದ್ದಾರೆ.

(ಕೃಪೆ - ಹೊಸದಿಗಂತ)



# ವಾರ್ತಾಲಹರಿ

## ವೈಭವದ ರಜತೋತ್ಸವ

ತಿರುಮಲೆ - ತಿರುಪತಿ ದೇವಸ್ಥಾನಗಳ ಧರ್ಮ ಪ್ರಚಾರ ಪರಿಷತ್ ಆರಂಭವಾಗಿ 25 ವರ್ಷಗಳು ಆದ ಜನವರಿ 27, 28, 29 ರಂದು ತಿರುಪತಿ ತಿರುಮಲೆಗಳಲ್ಲಿ ವೈಭವದಿಂದ ರಜತೋತ್ಸವ ಗಳು ನಡೆದು, ತದಂಗವಾಗಿ ಮುಂದಿನ ದಿನಗಳಿ ಗಾಗಿ ಹೊಸ ಕಾರ್ಯಕ್ರಮಗಳ ಹಲವು ನಿರ್ಣಯಗ ಳನ್ನು ಧರ್ಮಾಚಾರ್ಯರ ಸಾಧುಸಂತರ ಸಭೆಯಲ್ಲಿ ಕೈಗೊಳ್ಳಲಾಗಿದೆ.

ಈ ರಜತೋತ್ಸವದ ಅಂಗವಾಗಿ 27 ರ ಜನ ವರಿ 96 ರಂದು ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ ಪಾಂಡಿಚೇರಿಗಳಿಂದ ಆಗಮಿಸಿದ ನೂರ ಐವತ್ತು ಭಜನ ವೃಂದಗಳು ಸುಮಾರು ಐದು ಸಾವಿ ರಕ್ಕೂ ಹೆಚ್ಚಿದ ಜನ ತಿರುಪತಿಯ ಮುಖ್ಯ ಬೀದಿ ಗಳಲ್ಲಿ ಹರಿನಾಮ ಸಂಕೀರ್ತನೆ ಮಾಡುತ್ತ ಅಲಿಪಿರಿ ಯನ್ನು ತಲುಪಿದರು. ಕಂಚಿ ಕಾಮಕೋಟಿ ಪೀಠಾಧಿ ಪತಿಗಳು ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಗಳು, ಮುಳಬಾ ಗಿಲಿನ ಶ್ರೀಪಾದರಾಜಮಠದ ಶ್ರೀ ಶ್ರೀ ವಿಜ್ಞಾನ ನಿಧಿ ತೀರ್ಥ ಶ್ರೀಪಾದರು, ಕುಟ್ರಾಲಂ ಪೀಠಾಧಿ ಪತಿ ಶ್ರೀ ಶ್ರೀ ಶಿವಚಿದಾನಂದ ಭಾರತಿ, ಹಂಪೆಯ ಶ್ರೀ ಶ್ರೀ ವಿರೂಪಾಕ್ಷ ಜಗದ್ಗುರು ಶಂಕರಾಚಾರ್ಯ - ಮತ್ತಿತರ ಪೀಠಾಧಿಪತಿಗಳೂ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕು ಮಾರ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣ ರಾವ್, ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ವಿಶೇಷ ದರ್ಜೆಯ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಇ. ಓ. ಕೃಷ್ಣಸ್ವಾಮಿ ಮೊದಲಾದವರು ಸೇರಿದ್ದರು. ಅಲಿಪಿರಿಯಲ್ಲಿ ಮೆಟ್ಟಿಲ ಪೂಜೆಯ ತರುವಾಯ ಭಜನ ವೃಂದಗಳು ಗೋವಿಂದ ಗಾನ ಸಂಕೀರ್ತ ನೆಯಲ್ಲಿ ತೇಲುತ್ತ ಬೆಟ್ಟವನ್ನೇರಿದವು. ಭಜನ ಮೇಳ ವನ್ನು ಮೊದಲಬಾರಿಗೆ ಆಯೋಜಿಸಿದ ಕಾರ್ಯ ನಿರ್ವಹಣಾಧಿಕಾರಿಯವರು ಭಕ್ತರಿಂದ ಉತ್ಸಾ ಹದ ಪ್ರತಿಸ್ಪಂದನ ಕಂಡು ಬಂದಿದೆಯಾದ್ದರಿಂದ ಈ ರೀತಿಯ ಭಜನ ಮೇಳವನ್ನು ಪ್ರತಿವರ್ಷವೂ ನಡೆ ಸುವ ಯೋಜನೆಯಿದೆ ಎಂದರು. ಸ್ವಾಮಿಜೀಗಳ ಹಸ್ತದಿಂದ ಭಕ್ತರಿಗೆ ಸ್ವಾಮಿಯ ತಾಮ್ರದ ಕಾಸುಗ ಳನ್ನು ವಿತರಿಸಲಾಯಿತು.

















28 ರಂದು ಬೆಳಗ್ಗೆ ತಿರುಮಲೆಯ ಆಸ್ಥಾನ ಮಂಟಪದಿಂದ ಭಜನ ವೃಂದಗಳೆಲ್ಲ ಧರ್ಮಾಚಾರ್ಯರ ನೇತೃತ್ವದಲ್ಲಿ ಸ್ವಾಮಿ ಆಲಯದ ಮುಂದೆ ಮೆರವಣಿಗೆಯಲ್ಲಿ ಬಂದು ಸೇರಲು, ಆಲಯದಿಂದ ಮಲೆಯಪ್ಪಸ್ವಾಮಿ, ಶ್ರೀದೇವಿ, ಭೂದೇವಿಯರೊಡನೆ ಆಲಯದ ಹೊರಬಂದು ರಥಬೀದಿಗಳಲ್ಲಿ ಮೆರವಣಿಗೆಯಲ್ಲಿ ಹೊರಟರು. ಸ್ವಾಮಿಯನ್ನು ವಿವಿಧ ಭಾಷೆಗಳಲ್ಲಿ, ವಿವಿಧ ಭಾವಗಳಿಂದ ಕೀರ್ತಿಸುತ್ತ ಭಜನ ವೃಂದಗಳು ಹಿಂಬಾಲಿಸಿದವು. ಅಂದು ಸಂಜೆ ಧರ್ಮಾಚಾರ್ಯರು ಭಕ್ತರಿಗೆ ಅನುಗ್ರಹದ ಆಶೀರ್ವಚನ ನೀಡಿದರು.

ರಜತೋತ್ಸವದ ಅಂಗವಾಗಿ ನಡೆದ ಇನ್ನೊಂದು ಮುಖ್ಯ ಕಾರ್ಯಕ್ರಮವೆಂದರೆ ಮೂರುದಿನ ನಡೆದ ಸಾಧು ಸಮ್ಮೇಳನ. ಈ ಸಮ್ಮೇಳನದಲ್ಲಿ ನಾನಾ ಪ್ರಾಂತಗಳಿಂದ ಸುಮಾರು 64 ಮಂದಿ ಪೀಠಾಧಿಪಗಳು ಭಾಗವಹಿಸಿದ್ದರು. ಅಹೋಬಿಲ ಮಠದ ಸ್ವಾಮಿಗಳು ತಾವು ಬರಲಾಗದಿದ್ದರೂ ತಮ್ಮ ಪ್ರತಿನಿಧಿಯ ಮೂಲಕ ತಮ್ಮ ದಿವ್ಯಸಂದೇಶವನ್ನು ಕಳುಹಿಸಿದ್ದರು. ಹಿಂದೂ ಧರ್ಮದ ಚಾರಿತ್ರಿಕ ಪರಂಪರೆ, ದಿವ್ಯವಾದ ಸಹಿಷ್ಣುತೆ, ನಿತ್ಯ ಪರಿಶುದ್ಧತೆಯ ಪ್ರಯತ್ನಗಳನ್ನು ವಿಶ್ಲೇಷಣೆಗೆ ಒಳಗಾಗಿಸಿ, ಇಂದಿನ ಸಮಾಜ ಎದುರುಸಿತ್ತಲಿರುವ ವಿವಿಧ ಮುಖದ ಸಮಸ್ಯೆಗಳನ್ನು ಪರಿಶೀಲಿಸಿ ಹಲವಾರು ದೀರ್ಘಕಾಲಿಕ ಹಾಗೂ ತಕ್ಷಣದ ಕಾರ್ಯಕ್ರಮಗಳನ್ನು ಕೈಗೊಳ್ಳಲು ಈ ಸಂತರು ಶ್ರಮಿಸಿದರು. ಅವುಗಳಲ್ಲಿ ಮುಖ್ಯವಾದ ನಿರ್ಣಯಗಳು ಎಂದರೆ-

* ಧರ್ಮಪ್ರಸಾರಕ್ಕಾಗಿ ವರ್ಷಕ್ಕೆ ಎರಡು ಮೂರು ಬಾರಿ ತಿರುಮಲೆಯಲ್ಲಿ ಭಜನ ಮೇಳಗಳನ್ನು ನಡೆಸುವುದು.
* ಚಿಕ್ಕ ಮಕ್ಕಳಲ್ಲಿ ಭಕ್ತಿಯನ್ನು ಹೆಚ್ಚಿಸಲು ಸುಪ್ರಭಾತ, ಭಗವದ್ಗೀತೆಗಳಲ್ಲಿ ನಡೆಸತಕ್ಕ ಸ್ಪರ್ಧೆಗಳನ್ನು ಮತ್ತೂ ಹೆಚ್ಚಿಸಬೇಕು.
* ಪ್ರತಿ ಜಿಲ್ಲೆಯಲ್ಲೂ ಶ್ರೀ ವೆಂಕಟೇಶ್ವರ ಭಜನ ಮಂಡಳಿಗಳನ್ನುಂಟುಮಾಡಿ ಸಪ್ತಾಹಗಳನ್ನು ಏರ್ಪಡಿಸಬೇಕು.
* ಎಲ್ಲ ಜಿಲ್ಲಾ ಕೇಂದ್ರಗಳಲ್ಲೂ ಜಿಲ್ಲಾ ಸ್ಥಾಯಿಯಲ್ಲಿ ಯಜ್ಞಗಳನ್ನು ನಡೆಸುವಂತೆ ಆಗದೇಕು. ಫೆಬ್ರವರಿ 25, 26, 27 - 1996 ರಲ್ಲಿ ವಿಶಾಖಪಟ್ಟಣದಲ್ಲಿ ಅದ್ಭುತ ಶಾಂತಿಯಜ್ಞವನ್ನು ನಡೆಸಬೇಕು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು ಸಮಾವೇಶದಲ್ಲಿ ಪಾಲ್ಗೊಂಡ ಸ್ವಾಮಿಜೀಗಳನ್ನು ಸತ್ಕರಿಸಿದರು.

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡಳಿ ಜನವರಿ 31 ಹಾಗೂ ಫೆಬ್ರವರಿ 1 ರಂದು ಹೈದರಾಬಾದಿನಲ್ಲಿ ಸಮಾವೇಶವಾಗಿ ಹಲವಾರು ನಿರ್ಣಯಗಳನ್ನು ಕೈಗೊಂಡಿದೆ.

* ತಿರುಮಲೆಯ ಆಲಯದಲ್ಲಿ ಲಾಡು ಪಡಿ ಸೇವೆಯ ಆರ್ಜಿತ ಸೇವೆಯನ್ನು ಪ್ರವೇಶಗೊಳಿಸಲು ತೀರ್ಮಾನಿಸಲಾಗಿದೆ. ಇದರಂತೆ ರೂ. 250 ಶುಲ್ಕ ಸಲ್ಲಿಸಿದ ಭಕ್ತರಿಗೆ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ಇಬ್ಬರಿಗೆ ಸ್ವಾಮಿದರ್ಶನಕ್ಕೆ ಅವಕಾಶ ನೀಡಿ ಹತ್ತು ಲಾಡುಗಳನ್ನು ಪ್ರಸಾದವಾಗಿ ನೀಡಲಾಗುತ್ತದೆ.

* ಮಾರ್ಚ್ 1 ರಿಂದ ಅರ್ಚನಾನಂತರ ದರ್ಶನವನ್ನು ಆರ್ಜಿತ ಸೇವೆಯನ್ನಾಗಿ ಪ್ರವೇಶಗೊಳಿಸಲಾಗುವುದು. ಶುಕ್ರವಾರಗಳ ಹೊರತು ಪ್ರತಿದಿನವೂ ನಡೆಯುವ ಅರ್ಚನೆ ಸೇವೆಗೆ 200 ರೂಪಾಯಿಗಳು ಸೇವಾಶುಲ್ಕದ ಜೊತೆಗೆ ಅರ್ಚನಾನಂತರ ದರ್ಶನಕ್ಕೆ 100 ರೂಪಾಯಿಗಳು ಸೇವಾಶುಲ್ಕ ನೀಡಬೇಕಾಗುವುದು. ಎಂದು ತೀರ್ಮಾನಿಸಲಾಗಿದೆ.

* ತಿರುಪತಿಯಲ್ಲಿ ತಿ.ತಿ.ದೇ. ನಿರ್ಮಿಸಿರುವ ಎಸ್.ವಿ. ಸಭಾಭವನದಲ್ಲಿ ಏರ್‌ಕಂಡಿಷನ್ ವ್ಯವಸ್ಥೆಗಾಗಿ ಒಂದು ಕೋಟಿ ರೂಪಾಯಿಗಳೂ ಇತರ ಪ್ರತ್ಯೇಕ ಕೆಲಸಗಳಿಗಾಗಿ 40 ಲಕ್ಷ ರೂಪಾಯಿಗಳೂ ನೀಡಲು ತೀರ್ಮಾನಿಸಲಾಗಿದೆ.

* ತಿರುಪತಿಯ ನಾಲ್ಕು ಪ್ರಧಾನ ರಸ್ತೆಗಳ ಅಭಿವೃದ್ಧಿಗಾಗಿ, 786 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ. ಕಾರ್ವೇಟಿನಗರದಲ್ಲಿ ರಸ್ತೆ ನಿರ್ಮಾಣಕ್ಕೆ 6 ಲಕ್ಷ ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

* ರಾಜ್ಯ ಸರ್ಕಾರದ ಸಾಂಸ್ಕೃತಿಕ ಇಲಾಖೆಯ ಮೂಲಕ ಆಧ್ಯಾತ್ಮಿಕ, ಧಾರ್ಮಿಕ ಪ್ರದರ್ಶನಗಳ ನಿರ್ವಹಣೆಗೆ 50 ಸಾವಿರ ರೂಗಳನ್ನೂ ನೀಡಲು ತೀರ್ಮಾನಿಸಲಾಗಿದೆ.

* ಜಿಲ್ಲಾಕೇಂದ್ರಗಳಲ್ಲಿ ಶ್ರೀಮನ್ನಾರಾಯಣ ಶಾಂತಿ ಯಜ್ಞವನ್ನು ನಿರ್ವಹಿಸಲು ತೀರ್ಮಾನಿಸಲಾಗಿದೆ.

* ತಿ. ತಿ. ದೇವಸ್ಥಾನಗಳಲ್ಲಿ ಕೆಲಸ ಮಾಡುವ ಹೋಂಗಾರ್ಡ್‌ಗಳ ವೇತನವನ್ನು ಹೆಚ್ಚಿಸಲು ತೀರ್ಮಾನಿಸಲಾಗಿದೆ.



* ತಿರುಪತಿಯ ಮೊದಲ ಸತ್ರವನ್ನು ಧರ್ಮಸತ್ರವನ್ನಾಗಿ ಪರಿವರ್ತಿಸಿ, ಯಾತ್ರಿಕರಿಗೆ ಉಚಿತವಾಗಿ ವಸತಿ ಸೌಕರ್ಯ ಕಲ್ಪಿಸಬೇಕೆಂದೂ, ಮೂರನೇ ಸತ್ರದ ನೆಲ ಅಂತಸ್ತಿನ ಕೋಣೆಗಳಿಗೆ ದಿನಂಪ್ರತಿ 30 ರೂಗಳ ಸೇವಾಶುಲ್ಕವನ್ನು ಪಡೆಯಬೇಕೆಂದೂ ತೀರ್ಮಾನಿಸಲಾಗಿದೆ.

* ನಾರಾಯಣವನದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ, ನಾಗುಲಾಪುರದ ಶ್ರೀ ವೇದ ನಾರಾಯಣಸ್ವಾಮಿ ಆಲಯಗಳಿಗೆ ನೀಡುವ ನಿತ್ಯ ಪುಷ್ಪಕೈಂಕರ್ಯದ ದಿಟ್ಟವನ್ನು ಹತ್ತು ಕಿಲೋಗಳಿಗೆ ಹೆಚ್ಚಿಸಬೇಕೆಂದು ತೀರ್ಮಾನಿಸಲಾಗಿದೆ.

* ಸಮಗ್ರವನಾಭಿವೃದ್ಧಿ ಯೋಜನೆಯನ್ನು ಸದ್ವಿನಿಯೋಗಗೊಳಿಸುವ ದೃಷ್ಟಿಯಿಂದ ಈ ಹಿಂದೆ ನಿವೃತ್ತರಾದ ಅರಣ್ಯ ಇಲಾಖಾ ಚೀಫ್ ಕನ್ಸರ್ವೇಟರ್ ಶ್ರೀ ಕೆ. ರಾಜಶೇಖರ್ ಅವರ ಸೇವೆಯನ್ನು ಬಳಸಿಕೊಳ್ಳಬೇಕೆಂದು ತೀರ್ಮಾನಿಸಲಾಗಿದೆ.

## ಸಪ್ತ ವಾಹನಗಳಲ್ಲಿ ಸ್ವಾಮಿ ರಥ ಸಪ್ತಮಿಯ ರಥಿಕ

ಜನವರಿ 27ರ ಶನಿವಾರ ರಥಸಪ್ತಮಿ ಉತ್ಸವಗಳು ತಿರುಮಲೆಯಲ್ಲಿ ವೈಭವದಿಂದ ನಡೆದವು. ರಥ ಸಪ್ತಮಿಯ ಸಂದರ್ಭದಲ್ಲಿ ಸ್ವಾಮಿಯನ್ನು ಏಳು ವಾಹನಗಳಲ್ಲಿ ನಾಲ್ಕು ತೇರುಬೀದಿಯಲ್ಲೂ ಮೆರವಣಿಗೆ ಮಾಡಲಾಯಿತು.

ಬೆಳಗಿನ ಹೊತ್ತಿಗೇ ಮಲೆಯಪ್ಪಸ್ವಾಮಿಯನ್ನು ಸೂರ್ಯ ಪ್ರಭವಾಹನದಲ್ಲಿ ಆಸೀನಗೊಳಿಸಿ ಆಲಯದ ಮೆರವಣಿಗೆಯಲ್ಲಿ ಹೊರತಂದು ಸೂರ್ಯ ಕಿರಣಗಳು ಸ್ವಾಮಿಪಾದವನ್ನು ಸೋಕಿದಾಗ ಕಾಲ 7.25 ಆಗಿತ್ತು.

ನಂತರ ಶೇಷವಾಹನ, ಗರುಡವಾಹನ, ಹನುಮಂತವಾಹನ, ಕಲ್ಪವೃಕ್ಷವಾಹನ, ಸರ್ವಭೂಪಾಲ ವಾಹನಗಳು ನಡೆದುವು. ಒಂದೊಂದು ವಾಹನವೂ ನಾಲ್ಕು ಬೀದಿಗಳನ್ನು ಸುತ್ತಿ ಬರಲು ಎರಡು ಗಂಟೆಯ ಕಾಲ ಹಿಡಿದು, ಊರ ಜನವೆಲ್ಲ ರಸ್ತೆಗಳಲ್ಲಿ ತುಂಬಿ ಅತ್ಯುತ್ಸಾಹ ಸಂಭ್ರಮಾನಂದಗಳಿಂದ ಸ್ವಾಮಿಯನ್ನು ಸ್ವಾಗತಿಸಿದರು. ರಾತ್ರಿ ಎಂಟುಗಂಟೆಯ ಹೊತ್ತಿಗೆ ಚಂದ್ರಪ್ರಭವಾಹನದಲ್ಲಿ ಸ್ವಾಮಿಯ ಮೆರವಣಿಗೆ ಪುರಬೀದಿಗಳಲ್ಲಿ ಬಂದಾಗ ಜನರ ಯಾತ್ರಿಕರ ಆನಂದೋತ್ಸಾಹ ತಾರಕಕ್ಕೇರಿತು.

ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಎಸ್. ಓ. ಶ್ರೀ ಕೃಷ್ಣರಾವ್, ವಿಶೇಷದರ್ಜೆಯ ಡೆ.ಇ.ಓ. ಶ್ರೀ ವಾಸುದೇವನ್ ಅವರುಗಳು ಇತರರೊಡನೆ ಭಾಗವಹಿಸಿದ್ದರು.

## ತಿ. ತಿ. ದೇ. ಉದ್ಯೋಗಿಯ ಪ್ರಾಮಾಣಿಕತೆ



ದೈವದರ್ಶನಕ್ಕೆ ಬಂದ ಯಾತ್ರಿಕರು ಕಳೆದುಕೊಂಡ ನಗದು ಚೀಲವನ್ನು ತಿ.ತಿ.ದೇ. ಉದ್ಯೋ









ಗಿಯ ಪ್ರಾಮಾಣಿಕತೆಯಿಂದ ಮರಳಿ ಪಡೆಯುವಂತಾಗಿರುವುದು ವರದಿಯಾಗಿದೆ.

ಮುದ್ದನೂರಿನ ರೈಲ್ವೆ ಕಾಂಟ್ರಾಕ್ಟರ್ ಶ್ರೀ ರಾಮಾಂಜನೇಯುಲು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ಸ್ವಾಮಿ ದರ್ಶನ ಪಡೆದು ಹಿಂದಿರುಗುವಾಗ, ತಮ್ಮ 25 ಸಾವಿರ ರೂಗಳು ನಗದು ಹಾಗೂ 25 ಸಾವಿರ ರೂಗಳ ಡಿ.ಡಿ.ಯಿದ್ದ ತಮ್ಮ ಕ್ಯಾಷ್‌ಬ್ಯಾಗನ್ನು ಮರೆತು ಹೋದರು. ಆಲಯದಲ್ಲಿ ಕೆಲಸಮಾಡುವ ಪರಾಫ್ ಶ್ರೀ ಯುವರಾಜು ಅವರಿಗೆ ಈ ಕೈಚೀಲ ದೊರಕಿ ಅದನ್ನು ಅವರು ಅಧಿಕಾರಿಗಳಿಗೆ ಒಪ್ಪಿಸಿದ ನಂತರ ಕೈಚೀಲವನ್ನು ಹುಡುಕುತ್ತ ಒಂದು ಗಂಟೆಯ ನಂತರ ಶ್ರೀ ರಾಮಾಂಜನೇಯುಲು ಆಲಯಕ್ಕೆ ಹಿಂದಿರುಗಿದಾಗ ಗುರುತು ಪರಿಚಯವನ್ನು ವಿಚಾರಿಸಿ ನಗದು ಚೀಲವನ್ನು ಅವರಿಗೆ ಹಿಂದಿರುಗಿಸಲಾಯಿತು.

## ಪಂಢರ ಪುರದಲ್ಲಿ ಪುರಂದರ ಆರಾಧನೆ

ಪೂನಾದ ಹರಿದಾಸ ಸೇವಾಸಂಘ ಹಾಗೂ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಪಂಢರಪುರದಲ್ಲಿ ಪುರಂದರದಾಸರ 432 ನೇ ಆರಾಧನೋತ್ಸವ 19-1-96 ರಿಂದ 22-1-96 ರ ವರೆಗೆ ವೈಭವೋತ್ಸಾಹಗಳಿಂದ ಸಾಂಗವಾಯಿತು.

19-1-96 ರಂದು ಪುರಂದರ ದಾಸರ ಚಿತ್ರದ ಮೆರವಣಿಗೆಯಲ್ಲಿ ಎಂಟು ಭಜನಮಂಡಳಿಗಳು ಭಾಗವಹಿಸಿ ಪಂಡರಪುರ ವೀಧಿಗಳಲ್ಲಿ ಪುರಂದರ ದಾಸರ ಕೃತಿಗಳನ್ನು ಹಾಡುತ್ತ ನಡೆದವು. ನಂತರದ ದಿನದಲ್ಲಿ ಪಂಡರಪುರದ ಶ್ರೀ ಪಾಂಡುರಂಗ ದೇವಾಲಯದಲ್ಲಿನ ಪುರಂದರ ದಾಸರ ಕಂಭಕ್ಕೆ ಅಭಿಷೇಕ ಪೂಜೆಗಳೂ, 21-1-96 ರಂದು ಮಜ್ಜಿಗೆ ಹಿಟ್ಟಿನ ಪಾಂಡುರಂಗನಿಗೆ ಅಭಿಷೇಕ ಪೂಜೆಗಳೂ, 22-1-96 ರಂದು ಗೋಪಾಲ ಕಾವಲಿ, ಅವಭೃಥಗಳು ನಡೆದವು. ಮೂರು ದಿನಗಳೂ ಶ್ರೀ ಮಳಗಿ ಜಯತೀರ್ಥಾಚಾರ್ಯರೂ, ಶ್ರೀ ನಾಗರಾಜರಾಯರೂ ಹರಿದಾಸ ಸಾಹಿತ್ಯದ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ಶ್ರೀನಿವಾಸದಾಸರು ಹರಿಕಥೆ ನಡೆಸಿಕೊಟ್ಟರು. ದಾಸಸಾಹಿತ್ಯಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ವಿದ್ವಾಂಸರನ್ನು ಸನ್ಮಾನಿಸಿ ವಂದನಾರ್ಪಣೆ ಗೈದರು.

ತತ್ಸಂಬಂಧದಲ್ಲಿ ತಿ.ತಿ.ದೇ. ಧಾರ್ಮಿಕ ಪುಸ್ತಕ ಪ್ರದರ್ಶನವೂ ಏರ್ಪಾಡಾಗಿದ್ದು ಜನ ಉತ್ಸಾಹದಿಂದ ಕನ್ನಡ, ಹಿಂದಿ, ಆಂಗ್ಲ ಧಾರ್ಮಿಕ ಗ್ರಂಥಗಳನ್ನು ಶೇ. 10 ರಿಂದ ಶೇ. 25 ವರೆಗಿನ ರಿಯಾಯಿತಿ ದರಗಳಲ್ಲಿ ಕೊಂಡುಕೊಳ್ಳುತ್ತಿರುವುದನ್ನು ಕಾಣಲಾಯಿತು.

# ಶ್ಲಾಘ್ಯಸೇವೆ - ಪುರಸ್ಕಾರ



ಐಕ್ಯ ರಾಷ್ಟ್ರ ಸಮಿತಿಯ ಐವತ್ತನೇ ವರ್ಷ ಹಾಗೂ ಅಂತರ ರಾಷ್ಟ್ರೀಯ ಯುವ ವರ್ಷದ ಹತ್ತನೆಯ ವರ್ಷದ ನೆನಪಿನ ಸಮಾರಂಭದಲ್ಲಿ ಐಕ್ಯರಾಷ್ಟ್ರ ಸಂಘದ ಕೇಂದ್ರದಲ್ಲಿ, ತಿರುಪತಿಯ ಶ್ರೀ ಪದ್ಮಾವತೀ ಮಹಿಳಾಕಾಲೇಜಿನ ಮಾಜೀ ಪ್ರಾಂಶುಪಾಲ ಶ್ರೀಮತಿ ಡಾ|| ಕೆ. ರಾಜೇಶ್ವರಿ ಮೂರ್ತಿ ಅವರಿಗೆ 'ಅತಿವಿಶಿಷ್ಟ ಕೊಡುಗೆಯ ಪ್ರಶಸ್ತಿ'ಯನ್ನು ಅಕ್ಟೋಬರ್ 23 ರಂದು ನೀಡಲಾಗಿದೆ ಎಂದು ತಿಳಿಸಲು ಸಂತಸವಾಗುತ್ತದೆ.

ಮದರಾಸು ವಿಶ್ವವಿದ್ಯಾಲಯದಲ್ಲಿ ಗಣಿತ ಶಾಸ್ತ್ರದಲ್ಲಿ ಎಂ. ಎ. ಪಡೆದ ಶ್ರೀಮತಿಯವರು ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಉನ್ನತ ಶಿಕ್ಷಣ ಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದು ಹಲವಾರು ವಿದೇಶೀ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಅಧ್ಯಾಪನಗಳನ್ನು ನಡೆಸಿ ಖ್ಯಾತಿವೆತ್ತವರು. ಅವರು ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಪದ್ಮಾವತೀ ಮಹಿಳಾ ಕಾಲೇಜಿನ ಪ್ರಾಂಶುಪಾಲರಾಗಿ ಇಪ್ಪತ್ತೊಂದು ವರ್ಷಕಾಲ ಸೇವೆ ಸಲ್ಲಿಸಿ ಕಾಲೇಜಿಗೆ ಭಾರತದಲ್ಲಿ ಅತ್ಯುತ್ತಮ ಮಹಿಳಾ ಶೈಕ್ಷಣಿಕ ಕ್ಷೇತ್ರವೆಂಬ ಖ್ಯಾತಿಯನ್ನು ತಂದರು. ಅವರ ಈ ಶ್ಲಾಘ್ಯಸೇವೆಯನ್ನು ಆಂಧ್ರಪ್ರದೇಶದ ಶಿಕ್ಷಣದ ಕುಲಪತಿಗಳೂ ಆದ ರಾಜ್ಯಪಾಲರು ಗುರುತಿಸಿ ಸತ್ಕರಿಸಿದರು.

ಬೇರೆ ಬೇರೆ ಹುದ್ದೆಗಳಲ್ಲೂ ಮಾನವೋಪಯೋಗಿ ಸೇವೆಯನ್ನು ಸಲ್ಲಿಸಿದ ಶ್ರೀಮತಿ ಡಾ|| ರಾಜೇಶ್ವರಿ ಮೂರ್ತಿ ಅವರು ಸಧ್ಯಕ್ಕೆ ನ್ಯೂಯಾರ್ಕ್ ನಗರದ ಆಡ್ರೇ ಕಾಲೇಜಿನ ರಿಜಿಷ್ಟ್ರಾರರಾಗಿದ್ದಾರೆ.

# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ

ತಿರುಮಲೆ

## ಆರ್ಜಿತ ಸೇವಾ ವಿವರ



### ದೈನಂದಿನ ಸೇವೆಗಳು :

| ಸೇವೆ | ಶುಲ್ಕ | ಪ್ರವೇಶಾವಕಾಶ | ಕಾಲ |
|---|---|---|---|
| 1. ಸುಪ್ರಭಾತದರ್ಶನ | ರೂ. 100/- | ಒಬ್ಬರಿಗೆ | ಪ್ರಾ - 2-30 |
| 2. ತೋಮಾಲೆಸೇವೆ | ರೂ. 200/- | ಒಬ್ಬರಿಗೆ | ಪ್ರಾ - 3-30 |
| 3. ಅರ್ಚನೆ | ರೂ. 200/- | ಒಬ್ಬರಿಗೆ | ಪ್ರಾ - 4-30 |
| 4. ಶುಕ್ರವಾರಗಳಲ್ಲಿ ಅರ್ಚನೆ | | | |
| ಹಾಗೂ ತೋಮಾಲೆಸೇವೆ | ರೂ. 400/- | ಒಬ್ಬರಿಗೆ | ಪ್ರಾ - 6-30 |
| 5. ಆ ಮಂತ್ರಣೋತ್ಸವ | | | |
| ಶುಕ್ರವಾರಗಳ ಹೊರತು | ರೂ. 600/- | ಒಬ್ಬರಿಗೆ | ಪ್ರಾ - 3-30 |
| ಶುಕ್ರವಾರಗಳಲ್ಲಿ | ರೂ. 600/- | ಒಬ್ಬರಿಗೆ | ಪ್ರಾ - 6-30 |
| 6. ನಿಜಪಾದ ದರ್ಶನ | | | |
| ಶುಕ್ರವಾರಗಳಲ್ಲಿ | ರೂ. 100/- | ಒಬ್ಬರಿಗೆ | ಪ್ರಾ - 5-30 |
| 7. ವಿಶೇಷ ಪ್ರವೇಶ | ರೂ. 30/- | ಒಬ್ಬರಿಗೆ | ಸರ್ವದರ್ಶನದ ವೇಳೆ |
| 8. ಏಕಾಂತಸೇವೆ | ರೂ. 100/- | ಒಬ್ಬರಿಗೆ | ರಾತ್ರಿ - 10-30 ನಂತರ |

ಸೂಚನೆ :– 1 ರಿಂದ 6 ರ ವರೆಗಿನ ಸೇವೆಗಳಿಗೆ 90 ದಿನಗಳ ವರೆಗೆ ಮೊದಲೇ ಮಾಸಲಾತಿ ಪಡೆಯಬಹುದು. ವಿಶೇಷ ಪ್ರವೇಶ, ಏಕಾಂತ ಸೇವೆಗಳಿಗೆ ಮುಂಗಡ ಕಾಯ್ದಿರಿಸುವಿಕೆಯಿಲ್ಲ. ಏಕಾಂತ ಸೇವೆಯ ಟಿಕೆಟ್‌ಗಳನ್ನು ರಾತ್ರಿ 10-30 ರ ನಂತರ ಸರ್ವದರ್ಶನಾನಂತರದ ಕಾಲಾವಕಾಶವನ್ನು ಅನುಸರಿಸಿ ನೀಡಲಾಗುವುದು.

### ಉತ್ಸವಗಳು :

1. ಕಲ್ಯಾಣೋತ್ಸವ - ರೂ. 2500/- ಬೆಳಗ್ಗೆ 10 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪಸದಕಣ, ದೊಡ್ಡ ಲಾಡು-5, ಅಪ್ಪ-5, ವಡೆ-5, ದೋಸೆ-5, ಸಿಹಿ ಪೊಂಗಲು, ಪೊಂಗಲು, ಪುಳಿಯೋಗರೆ, ದಧ್ಯೋದನ $\frac{1}{16}$ ಸೋಲ.
2. ಪ್ರತ್ಯೇಕ ಕಲ್ಯಾಣೋತ್ಸವ- ರೂ. 750/- ಬೆಳಗ್ಗೆ 10 ಗಂ|| ಇಬ್ಬರಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪಸದಕಣ, ಲಾಡು-1, ವಡೆ-1.
3. ಆರ್ಜಿತ ಬ್ರಹ್ಮೋತ್ಸವ ರೂ. 500/- ದಿನಕ್ಕೆ, ಮಧ್ಯಾಹ್ನ 1 ಗಂ|| 5 ಮಂದಿಗೆ ಪ್ರವೇಶ. ವಾಹನಗಳು - ದೊಡ್ಡ ಶೇಷವಾಹನ, ಬೆಳ್ಳಿಯ ಗರುಡವಾಹನ, ಬೆಳ್ಳಿಯ ಹನುಮಂತವಾಹನ.
4. ಡೋಲೋತ್ಸವ (ಊಂಜಲ್‌ಸೇವೆ) ರೂ. 750/- ಮಧ್ಯಾಹ್ನ - 1-30 ಗಂ|| 6 ಮಂದಿಗೆ ಪ್ರವೇಶ.
   ಮುಕುರಮಂಟಪದಲ್ಲಿ ನಡೆಯುವ ಈ ಸೇವೆಯಲ್ಲಿ ಶೇಷವಸ್ತ್ರ ಬಹುಮಾನವಿದೆ.
5. ವಸಂತೋತ್ಸವ : ರೂ. 3000/- ದಿನಕ್ಕೆ, ಮಧ್ಯಾಹ್ನ - 2 ಗಂ|| 10 ಮಂದಿಗೆ ಪ್ರವೇಶ.
   ಬಹುಮಾನ: ವಸ್ತ್ರ, ವಡೆ-6, ದೋಸೆ-20, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್.
6. ಸಹಸ್ರ ದೀಪಾಲಂಕಾರ : ರೂ. 500/- ಸಂಜೆ - 5-30 ಗಂ||, ಈ ಸೇವೆ ಆಲಯದ ಹೊರಗೆ ನಡೆಯುತ್ತದೆ. ಸೇವೆಯನಂತರ ವೈಕುಂಠದ ಮೂಲಕ 5 ಮಂದಿಗೆ ದರ್ಶನಾವಕಾಶ. ಬಹುಮಾನ - ವಸ್ತ್ರ.

ಸೂಚನೆ : 1ರಿಂದ 6 ರ ವರೆಗೆ ಎಲ್ಲ ಸೇವೆಗಳಿಗೂ ಮುಂಗಡ ಕಾಯ್ದಿರಿಸುವಿಕೆ 90 ದಿನಗಳ ಮೊದಲು ಮಾಡಬಹುದು.

### ವಾರ ಸೇವೆಗಳು - ಉತ್ಸವಗಳು

1. ವಿಶೇಷ ಪೂಜೆ - (ಸೋಮವಾರಗಳಲ್ಲಿ) ರೂ. 3000/- ಬೆಳಗ್ಗೆ 6-00 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ - ವಸ್ತ್ರ - ದೊಡ್ಡ ಲಾಡು-5, ವಡೆ-5.
2. ಅಷ್ಟದಳ ಪಾದ ಪದ್ಮಾರಾಧನೆ - (ಮಂಗಳವಾರಗಳಲ್ಲಿ) ರೂ. 3500/- ಬೆಳಗ್ಗೆ- 5-30 ಗಂ||, 5ಮಂದಿಗೆ ಪ್ರವೇಶ.
   ಬಹುಮಾನ : ವಸ್ತ್ರ ದೊಡ್ಡಲಾಡು-10, ವಡೆ-10.

3. ಸಹಸ್ರ ಕಲಶಾಭಿಷೇಕ (ಬುಧವಾರಗಳಲ್ಲಿ) ರೂ. 5000/- ಬೆಳಗ್ಗೆ- 5-30 ಗಂ||, 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು-7, ವಡೆ-7, ದೋಸೆ-5, ಅಪ್ಪ-5, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್, ಪಾಯಸ, $\frac{1}{32}$ ಸೋಲಿ.

4. ತಿರುಪ್ಪಾವಡಾ (ಗುರುವಾರಗಳಲ್ಲಿ) ರೂ. 5000/- ಬೆಳಗ್ಗೆ - 5-30 ಗಂ|| 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು 7, ವಡೆ - 7, ಅಪ್ಪ-5, ದೋಸೆ-5, ತೆನೆತೋಳೆ-5, ಜಿಲೇಬಿ-5, ಪುಳಿಯೋಗರೆ, ಪಾಯಸ - $\frac{1}{32}$ ಸೋಲಿ.

5. ಅಭಿಷೇಕ (ಶುಕ್ರವಾರಗಳಲ್ಲಿ) ಬೆಳಗ್ಗೆ - 3-30 ಗಂ||

ಪೂರಾಭಿಷೇಕ - ರೂ. 750/- ಒಬ್ಬರಿಗೆ, ಬಹುಮಾನ - 2 ಚಿಕ್ಕಲಾಡು, 2 ವಡೆ.

ಪುನುಗುಬಟ್ಟಲು - ರೂ. 300/- ಒಬ್ಬರಿಗೆ, ಬಹುಮಾನ - 1 ಚಿಕ್ಕ ಲಾಡು, 1 ವಡೆ.

ಕಸ್ತೂರಿ ಬಟ್ಟಲು - ರೂ. 150/- ಒಬ್ಬರಿಗೆ, ಬಹುಮಾನ - 1 ಚಿಕ್ಕ ಲಾಡು, 1 ವಡೆ.

ಸೂಚನೆ :– 1 ರಿಂದ 4 ರ ವರೆಗೆ 90 ದಿನಗಳ ಮೊದಲು ಮುಂಗಡ ಕಾಯ್ದಿರಿಸುವ ಅವಕಾಶವುಂಟು. ಅಭಿಷೇಕದ ಮುಂಗಡ ಕಾಯ್ದಿರಿಸುವಿಕೆಯನ್ನು ಒಂದು ವರ್ಷದ ಮೊದಲು ಟಿಕೆಟ್‌ಗಳು ದೊರೆಯುವ ಅವಕಾಶ ಇದ್ದಲ್ಲಿ ಅಂಗೀಕರಿಸಲಾಗುವುದು.

## ವಾರ್ಷಿಕ ಸೇವೆಗಳು

1. ಪವಿತ್ರೋತ್ಸವ : ರೂ. 7500/- ಮೂರು ದಿನಗಳ ಉತ್ಸವ. ಸಾಮಾನ್ಯವಾಗಿ ಆಗಸ್ಟ್ ತಿಂಗಳಿನಲ್ಲಿ ನಡೆಯುತ್ತದೆ. ಉತ್ಸವ ಕಾಲದಲ್ಲಿ ಐದುಮಂದಿಗೆ ಪ್ರವೇಶ. ಒಂದು ದಿನ ಮಾತ್ರ ಆಲಯದ ಅನುಕೂಲಕ್ಕೆ ತಕ್ಕಂತೆ ತೋಮಾಲೆಸೇವೆ ಹಾಗು ಅರ್ಚನೆಗೆ ಇಬ್ಬರನ್ನು ಅನುಮತಿಸಲಾಗುವುದು.

ಬಹುಮಾನ : 2 ಹಾಗೂ 3 ನೇ ದಿನಗಳು - 30 ದೋಸೆ, ಪೊಂಗಲು, 3ನೇ ದಿನ - 6 ವಡೆ - ವಸ್ತ್ರ.

2. ಪುಷ್ಪಯಾಗ : ರೂ. 3500/- ಒಂದು ದಿನ. ಬೆಳಗ್ಗೆ 6 ಗಂಟೆಗೆ. ವಾರ್ಷಿಕ ಬ್ರಹ್ಮೋತ್ಸವದ ನಂತರದ ಶ್ರವಣ ನಕ್ಷತ್ರದ ದಿನ ನಡೆಯುವುದು. 5 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಉತ್ತರೀಯ, ದೊಡ್ಡಲಾಡು 1, ವಡೆ - 1.

3. ಪ್ಲವೋತ್ಸವ : ರೂ. 2500/- ಒಂದು ದಿನಕ್ಕೆ, ಸಂಜೆ 6 ಗಂಟೆಗೆ, ಸಾಮಾನ್ಯವಾಗಿ ಫೆಬ್ರವರಿ ಮಾರ್ಚ್‌ನಲ್ಲಿ ಐದು ದಿನ ನಡೆಯುವ ಉತ್ಸವ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ ಹಾಗೂ ಕುಪ್ಪಸದ ಕಣ.

4. ಪದ್ಮಾವತೀ ಪರಿಣಯ : ರೂ. 5000/- ದಿನಕ್ಕೆ, ಮಧ್ಯಾಹ್ನ - 3 ಗಂಟೆಗೆ, ಸಾಮಾನ್ಯವಾಗಿ ಪ್ರತಿವರ್ಷ ಜೂನ್ ತಿಂಗಳಿನಲ್ಲಿ ಮೂರುದಿನ ನಡೆಯುತ್ತದೆ. 5 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಕುಪ್ಪಸದ ಕಣ, ಲಾಡು 5, ವಡೆ 5.

5. ಅಭಿಧ್ಯೇಕ ಅಭಿಷೇಕ : ರೂ. 2000/- ದಿನಕ್ಕೆ, ಬೆಳಗ್ಗೆ - 8 ಗಂಟೆಗೆ - ಪ್ರತಿವರ್ಷ ಸಾಮಾನ್ಯವಾಗಿ ಜೂನ್ ತಿಂಗಳಿನಲ್ಲಿ ನಡೆಯುತ್ತದೆ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ, ಕುಪ್ಪಸದಕಣ, ಲಾಡು 1, ವಡೆ 1.

6. ಪುಷ್ಪ ಪಲ್ಲಕ್ಕಿ : ರೂ. 1000/- ಸಂಜೆ 5-30 ಗಂಟೆಗೆ. ಆನಿವರ ಆಸ್ಥಾನದ ದಿನದ ಸಂಜೆ ನಡೆಯುತ್ತದೆ. ಸಾಮಾನ್ಯವಾಗಿ ಪ್ರತಿವರ್ಷ ಜುಲೈ ತಿಂಗಳಿನಲ್ಲಿ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ - ಕುಪ್ಪಸದ ಕಣ, ಲಾಡು-1, ವಡೆ-1.

7. ಕೋಯಿಲ್ ಆಳ್ವಾರ್ ತಿರುಮಂಜನ : ರೂ. 3000/- ಬೆಳಗ್ಗೆ - 11 ಗಂಟೆಗೆ. ವರ್ಷದಲ್ಲಿ ನಾಲ್ಕು ಬಾರಿ ಮಂಗಳವಾರಗಳಲ್ಲಿ, ಉಗಾದಿ, ಆನಿವರ ಆಸ್ಥಾನ, ಬ್ರಹ್ಮೋತ್ಸವ, ವೈಕುಂಠ ಏಕಾದಶಿಗಳ ಮೊದಲು ನಡೆಯುತ್ತದೆ. 10 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಲಾಡು 15, ವಡೆ 15, ಅಪ್ಪ 10, ದೋಸೆ 10 ಹಾಗೂ ಅನ್ನಪ್ರಸಾದ.

ಸೂಚನೆ :– ಎಲ್ಲ ವಾರ್ಷಿಕ ಉತ್ಸವಗಳಿಗೂ ಅವಕಾಶ ಇದ್ದಂತೆ ಮುಂಗಡವಾಗಿ ಕಾಯ್ದಿರಿಸಲಾಗುವುದು.

## ಅನ್ನಪ್ರಸಾದಗಳು :

ಕೆಳಕಂಡ ಅನ್ನಪ್ರಸಾದಗಳ ನಿವೇದನೆಗಾಗಿ ಶುಲ್ಕವನ್ನು ಅಂಗೀಕರಿಸಲಾಗುತ್ತದೆ. ಪ್ರತಿಯೊಂದರ $\frac{1}{4}$ ಸೋಲವನ್ನು ನೀಡಲಾಗುವುದು.

1. ದಧ್ಯೋದನ - ರೂ. 100/-
2. ಪುಳಿಯೋಗರೆ - ರೂ. 200/-
3. ಪೊಂಗಲ್ - ರೂ. 225/-
4. ಸಕ್ಕರೆ ಪೊಂಗಲ್ - ರೂ. 250/-
5. ಶಾಕರಬಾತ್ - ರೂ. 250/-
6. ಸೀರಾ - ರೂ. 450/-
7. ಪಾಯಸ - ರೂ. 225/-

## ಲಾಡು ಪಡಿ :

ದೊಡ್ಡ ಲಾಡು ಪಡಿ - ರೂ. 2500/-

ಕಿರಿಯ ಲಾಡು ಪಡಿ - ರೂ. 750/-

ಒಂದು ಟಿಕೆಟ್ ಪಡೆದಲ್ಲಿ ಐದು ಮಂದಿಗೆ ಪ್ರವೇಶಾವಕಾಶ. ದರ್ಶನಾನಂತರ 30 ಲಾಡುವನ್ನು ನೀಡಲಾಗುವುದು.

## ಇತರ ವಾರ್ಷಿಕ ಯೋಜನೆಗಳು :

1. ಉದಯಾಸ್ತಮಾನ ಸರ್ವ ಸೇವಾ ಯೋಜನೆ :

ಶುಕ್ರವಾರದ ಹೊರತು ಇತರ ಯಾವುದೇ ದಿನದಲ್ಲಿ ಸೇವೆಗೆ ದತ್ತಿ ರೂ. 1 ಲಕ್ಷ

ಶುಕ್ರವಾರಗಳ ಸೇವೆಗೆ ದತ್ತಿ ರೂ. 3 ಲಕ್ಷ

ದತ್ತಿ ನೀಡಿದವರನ್ನು (ಒಟ್ಟು ಆರು ಮಂದಿ) ಸುಪ್ರಭಾತದಿಂದ ಏಕಾಂತಸೇವೆಯ ವರೆಗೆ ಎಲ್ಲ ಸೇವೆಗಳಿಗೂ ಅನುಮತಿಸಲಾಗುವುದು. ಆ ದಿನದ ಇತರ ಎಲ್ಲ ಆರ್ಜಿತ ಸೇವೆಗಳನ್ನೂ ನೋಡಲು ಅವಕಾಶ ನೀಡಲಾಗುವುದು.

ಬಹುಮಾನ : ಒಂದು ಕಲ್ಯಾಣೋತ್ಸವ ವಸ್ತ್ರ, 25 ಲಾಡು, 5 ವಡೆ (ಪ್ರತಿವರ್ಷ).

2. ಬಾಲಾಜೀ ಅರ್ಚನಾಯೋಜನೆ : ಈ ಯೋಜನೆಗೆ ನೀಡಬೇಕಾದ ದತ್ತಿ ರೂ. 6000/-

ದತ್ತಿ ನೀಡುವವರ ಹೆಸರಿನಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ ಅರ್ಚನೆಯನ್ನು ಮಾಡಲಾಗುವುದು. ದತ್ತಿ ನೀಡುವವರು ಅರ್ಚನೆಯ ದಿನವನ್ನು ಆಯ್ಕೆ ಮಾಡಿಕೊಳ್ಳಬಹುದು. ಯಾವುದೇ ವರ್ಷದಲ್ಲಿ ಈ ಆಯ್ಕೆಯ ದಿನ ಶುಕ್ರವಾರ ಬಂದರೆ ಮಾರನೆಯ ದಿನಕ್ಕೆ ಅನುಮತಿಸಲಾಗುವುದು.

ಸೌಲಭ್ಯ : ದತ್ತಿ ನೀಡಿದವರಿಗೆ ಅರ್ಚನೆಯ ದಿನದಂದು ಉಚಿತ ವಸತಿ ನೀಡಲಾಗುವುದು. ಮೂರು ಮಂದಿಯನ್ನು ಅರ್ಚನೆಗೆ ಅನುಮತಿಸಲಾಗುವುದು. ಸುಪ್ರಭಾತಸೇವೆ ಹಾಗು ವಿಶೇಷ ಪ್ರವೇಶದಲ್ಲಿ ಮೂರು ಮಂದಿಯನ್ನು ಅನುಮತಿ ಸಲಾಗುವುದು.

ಬಹುಮಾನ : ಉತ್ತರೀಯ, ಕುಪ್ಪಸದಕಣ, ಒಂದು ಕಿರಿಯ ಲಾಡು, ಒಂದು ವಡೆ.

## ಸಾಮಾನ್ಯ ಸೂಚನೆಗಳು

1. ಸೇವೆ ಉತ್ಸವಗಳನ್ನು ಮಾಡಿಸಲು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಹಣದ ಡಿ. ಡಿ. ಯನ್ನು ಪಡೆದು ಸೇವೆ, ಉತ್ಸವದ ಅಭ್ಯರ್ಥನ ಪತ್ರದೊಡನೆ ಪೇಷ್ಕಾರ್, ಶ್ರೀ ತಿರುಮಲೆ ದೇವಾಲಯ ತಿರುಮಲೆ 517 504 ಇವರಿಗೆ ಆಯಾ ಸೇವೆಗಳಲ್ಲಿ ಸೂಚಿಸಿರುವಂತೆ ಸಾಕಷ್ಟು ಮೊದಲು ಕಳುಹಿಸಬೇಕು. ಮುಂಗಡ ಕಾಯ್ದಿರಿಸುವಿಕೆಯನ್ನು ಅವಕಾಶವಿದ್ದಂತೆ ಏರ್ಪಡಿಸಿ, ಭಕ್ತರ ವಿಳಾಸಗಳಿಗೆ ಶೀಘ್ರವಾಗಿ ಖಚಿತ ಪತ್ರವನ್ನು ಕಳುಹಿಸಲಾಗುವುದು.
2. ಕಾಟೇಜುಗಳ ಮುಂಗಡ ಕಾಯ್ದಿರಿಸುವಿಕೆಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಪಡೆದ ಡಿ.ಡಿ. ಯನ್ನು ಮೂವತ್ತು ದಿನಗಳ ಮೊದಲು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ ರಿಸೆಪ್ಷನ್ I ತಿ.ತಿ.ದೇ. ತಿರುಮಲೆ 517 504 ಇವರಿಗೆ ಕಳುಹಿಸಿ ಮುಂಗಡ ಪತ್ರವನ್ನು ಪಡೆಯಬೇಕು.
3. ಹೆಚ್ಚಿನ ವಿವರಗಳಿಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ 517 501 ಇವರನ್ನು ವಿಚಾರಿಸಿ. ಸೇವೆ ಉತ್ಸವ ವಿವರಗಳಿಗಾಗಿ ಪೇಷ್ಕಾರ್, ತಿರುಮಲೆ ದೇವಾಲಯ ತಿರುಮಲೆ 517 504 ಇವರಲ್ಲಿ ವಿಚಾರಿಸಿ.
4. ಎಲ್ಲ ಸೇವೆ ಉತ್ಸವಗಳಿಗೂ ಪ್ರವೇಶಾವಕಾಶ ವೈಕುಂಠಂ ಕ್ಯೂ ಕಾಂಪ್ಲೆಕ್ಸಿನಿಂದ ಮಾತ್ರವೇ.

ಕಾರ್ಯನಿರ್ವಹಣಾಧಿಕಾರಿ,
ತಿ. ತಿ. ದೇವಸ್ಥಾನಗಳು, ತಿರುಪತಿ.

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

